ಜಯದೇವ ಮಹಾಕವಿಯ

# ಗೀತ ಗೋವಿಂದ

## ಮರದ 14 ಉಬ್ಬುಶಿಲ್ಪಗಳು

ಶಿಬಿರದ ಮಾರ್ಗದರ್ಶನ-ಬರಹ
**ಡಾ|| ಜಿ. ಜ್ಞಾನಾನಂದ**

ಶಿಲ್ಪ ಗುರುಗಳು
**ಶಿಲ್ಪಿ ಎಂ. ರಾಮಮೂರ್ತಿ**




ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಬೆಂಗಳೂರು-002

ಜಯದೇವ ಮಹಾಕವಿಯ

# ಗೀತ ಗೋವಿಂದ

ಮರದ ೧೪ ಉಬ್ಬುಶಿಲ್ಪಗಳು

ಶಿಬಿರದ ಮಾರ್ಗದರ್ಶನ-ಬರಹ

ಡಾ॥ ಜಿ. ಜ್ಞಾನಾನಂದ

ಶಿಲ್ಪ ಗುರುಗಳು

ಶಿಲ್ಪಿ ಎಂ. ರಾಮಮೂರ್ತಿ




ಕರ್ನಾಟಕ ಶಿಲ್ಪಕಲಾ ಅಕಾಡೆಮಿ

ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು - ೧

**Jayadeva Mahakaviya Geetha Govinda**
14 Basrelief Icons in wood

Project Guide-Script: **Dr. G. Jnanananda.** M.A., D.Litt,

Shilpa Guru : **Shilpi M. Ramamurthy**

Book Design: V.Raj, Vishwas Prints

*Published by*
**Smt D.R. Mythili,** Registrar
Karnataka Shilpakala Academy,
Kannada Bhavan, J.C. Road, Bangalore - 002

Pages : 64 **Price : Rs. 50/-**

First Edition : 2013



**ಜಯದೇವ ಮಹಾಕವಿಯ ಗೀತ ಗೋವಿಂದ**
ಮರದ ೧೪ ಉಬ್ಬು ಶಿಲ್ಪಗಳು

ಶಿಬಿರದ ಮಾರ್ಗದರ್ಶನ-ಬರಹ : **ಡಾ॥ ಜಿ. ಜ್ಞಾನಾನಂದ**

ಶಿಲ್ಪ ಗುರುಗಳು : **ಶಿಲ್ಪಿ ಎಂ. ರಾಮಮೂರ್ತಿ,** ಬೆಂಗಳೂರು

ಪುಸ್ತಕ ವಿನ್ಯಾಸ : ವಿ. ರಾಜ್, ವಿಶ್ವಾಸ್ ಪ್ರಿಂಟ್ಸ್

ಪ್ರಕಾಶಕರು :
**ಶ್ರೀಮತಿ ಡಿ.ಆರ್. ಮೈಥಿಲಿ** ರಿಜಿಸ್ಟ್ರಾರ್
ಶಿಲ್ಪಕಲಾ ಅಕಾಡೆಮಿ, ಕನ್ನಡ ಭವನ
ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨

**ಪುಟಗಳು : ೬೪** **ಬೆಲೆ ರೂ. ೫೦/-**



ವಿಶ್ವಾಸ್ ಪ್ರಿಂಟ್ಸ್
VISHWAS PRINTS
29/1, 3ನೇ ಅಡ್ಡರಸ್ತೆ, ನಂಜಾಂಬ ಅಗ್ರಹಾರ
ಚಾಮರಾಜಪೇಟೆ, ಬೆಂಗಳೂರು - 18
ದೂರವಾಣಿ : 26604835

## ಅಧ್ಯಕ್ಷರ ಮಾತು



ಸಂಸ್ಕೃತ ಸಾಹಿತ್ಯದಲ್ಲಿ ಗೀತಗೋವಿಂದ ಕಾವ್ಯಕ್ಕೆ ಬಹು ವಿಶಿಷ್ಟವಾದ ಸ್ಥಾನವಿದೆ. ಈ ಕಾವ್ಯವನ್ನು ಅಮೃತ ಭಾಂಡಾಗಾರವೆಂದು ಹೇಳುವುದುಂಟು. ಇದರ ಕರ್ತೃವಾದ ಜಯದೇವ ಕವಿಯು ಕಾಳಿದಾಸ, ಭವಭೂತಿ, ಶ್ರೀಹರ್ಷ, ಬಿಲ್ಹಣ, ಅಶ್ವಘೋಷ ಮುಂತಾದ ಮಹಾಕವಿಗಳ ಸಾಲಿಗೆ ಸೇರಿದವನು ಎಂಬ ಪ್ರಖ್ಯಾತಿಯೂ ಇದೆ. ಜಯದೇವ ಕವಿಯು ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದ್ದು ವಂಗದೇಶದ ಅಂತಿಮ ರಾಜನಾಗಿದ್ದ ರಾಜಾ ಲಕ್ಷ್ಮಣಸೇನನ ಆಸ್ಥಾನ ವಿದ್ವಾಂಸನಾಗಿದ್ದ ಎಂದು ಹೇಳುತ್ತಾರೆ. ಗೀತ ಗೋವಿಂದ ಕಾವ್ಯವು ಮಧುರಭಕ್ತಿ ಸಂಪ್ರದಾಯಕ್ಕೆ ಸೇರಿದ್ದು, ಶೃಂಗಾರ ರಸ ಪ್ರಧಾನವಾದದ್ದು. ಆದರೂ ಎಲ್ಲಾ ರಸಗಳ ಮಿಶ್ರಣವೇ ಈ ಕಾವ್ಯ. ಆದ್ದರಿಂದಲೇ ಪ್ರಬಂಧ ಕಾವ್ಯವಾಗಿ ಇದು ಪ್ರಖ್ಯಾತವಾಗಿದೆ. ಬಹು ಕ್ಷಿಪ್ರಕಾಲದಲ್ಲಿಯೇ ಗೀತಗೋವಿಂದವು ವಂಗರಾಜ್ಯದ ಎಲ್ಲೆಗಳನ್ನು ದಾಟಿ ಭಾರತ ದೇಶವನ್ನೆಲ್ಲಾ ವ್ಯಾಪಿಸಿಕೊಂಡಿತು. ಆಧುನಿಕ ಕಾಲದಲ್ಲಂತೂ ಈ ಕಾವ್ಯವು ಖಂಡಾಂತರ ಗಳನ್ನು ದಾಟಿ ಪ್ರಖ್ಯಾತವಾಗಿದೆ. ಜಗತ್ತಿನ ಎಲ್ಲಾ ಪ್ರಮುಖ ಭಾಷೆಗಳಿಗೂ ಈ ಕಾವ್ಯವು ಅನುವಾದಗೊಂಡಿದೆ ; ಪ್ರಶಂಸಿತವಾಗಿದೆ. ಈ ಕಾವ್ಯಕ್ಕೆ ಅಗಣಿತ ವ್ಯಾಖ್ಯೆಗಳು, ಟೀಕೆಗಳು, ವಿವರಣೆಗಳು, ವಿಶ್ಲೇಷಣೆಗಳು ಪ್ರಕಟವಾಗಿವೆ. ಪ್ರಪಂಚದ ಭಾಷಾ ಸಾಹಿತ್ಯದಲ್ಲಿ ಇಂದು ಗೀತಗೋವಿಂದ ಕಾವ್ಯವು ಬಹು ಉನ್ನತ ಸ್ಥಾನವನ್ನು ಗಳಿಸಿದೆ.

ಸಂಸ್ಕೃತ ಸಾಹಿತ್ಯದ ವ್ಯಾಪಕ ಬೆಳವಣಿಗೆಯು ಕ್ರಿ.ಶ. ೧೨ನೆಯ ಶತಮಾನಕ್ಕೆ ಸರಿಸುಮಾರಾಗಿ ಅಂತ್ಯಗೊಂಡಿರುವಂತೆ ಭಾಸವಾಗುತ್ತದೆ. ನಂತರದಲ್ಲಿ ಆ ಸಾಹಿತ್ಯವು ದೇಶೀ ಭಾಷಾ ಸಾಹಿತ್ಯದ ಬೆಳವಣಿಗೆಗೆ ತನ್ನ ಸ್ಥಾನವನ್ನು ಬಿಟ್ಟುಕೊಟ್ಟಿದೆ. ಜಯದೇವ ಕವಿಯು ಸಂಸ್ಕೃತ ಸಾಹಿತ್ಯಕ್ಕೆ ಮತ್ತು ದೇಶೀಯ ಭಾಷಾ ಸಾಹಿತ್ಯಕ್ಕೆ ವಾರಿಧಿಯಂತಹವನು. ಆತನು ನವೀನ ಕವಿಗಳಲ್ಲಿ ಆದ್ಯನು, ಪ್ರಾಚೀನ ಕವಿಗಳಲ್ಲಿ ಅಂತಿಮನೆಂದು ಗುರುತಿಸಲ್ಪಡುತ್ತಾನೆ. ಗೀತಗೋವಿಂದದ ರಚನಾ ಚಾತುರ್ಯವನ್ನು ಪಂಡಿತ ಪಾಮರರು ಸಮಾನವಾಗಿ ಪ್ರಶಂಸಿದ್ದಾರೆ. ಜಯದೇವ ಕವಿಯ ಭಾವ ಪ್ರಪಂಚದ ಸವಿಯುಂಡ ರಸಿಕರು ಆನಂದಿಸಿ ಮುಕ್ತರಾಗಿದ್ದಾರೆ. ರಾಧಾಕೃಷ್ಣರ ಪ್ರೇಮವನ್ನು, ಶೃಂಗಾರವನ್ನು

ವಿವರಿಸಿ ಸಾರುವ ಈ ಕಾವ್ಯ ಕೆಲವರಿಗೆ ಭಗವದ್ಗೀತೆಯಂತೆ ದ್ವೈತದಿಂದ ಅದ್ವೈತಕ್ಕೆ ಸೆಳೆದೊಯ್ಯುವ ಸಾಧನ.

ಗೀತಗೋವಿಂದ ಕಾವ್ಯವು ಸಂಸ್ಕೃತ ಭಾಷೆಯಲ್ಲೂ, ದೇಶಿ ಭಾಷೆಗಳಲ್ಲೂ ಅಮಿತವಾದ ಪ್ರಾಚುರ್ಯವನ್ನು ಪಡೆದುಕೊಂಡು ಜಯದೇವ ಕವಿಯನ್ನು ಕವಿಲೋಕ ಚಕ್ರವರ್ತಿಯನ್ನಾಗಿ ಮಾಡಿದೆ. ಅತಿ ಕ್ಷಿಪ್ರಗತಿಯಲ್ಲಿ ಇದು ಉಜ್ವಲಕಾವ್ಯವಾಗಿ ಪರಿಗಣಿಸಲ್ಪಟ್ಟಿತು. 'ಇದರ ಅಷ್ಟಪದಿಗಳ ಗಾನವನ್ನು ಮಾಡುವುದರಿಂದ, ಅಧ್ಯಯನ ಮಾಡುವುದರಿಂದ ಬುದ್ಧಿ ವಿಕಸಿಸುತ್ತದೆ. ಅವರ ಬಗ್ಗೆ ರಾಧಾಮಾಧವರು ಪ್ರಸನ್ನರಾಗುತ್ತಾರೆ.' ಎಂಬುದು ಬಹುಮಂದಿಯ ನಂಬಿಕೆ. ಗೀತಗೋವಿಂದ ಕಾವ್ಯವು ಇತರ ಅನೇಕ ಕಾವ್ಯಗಳಂತೆ ಕಾವ್ಯ ಸೌಂದರ್ಯಕ್ಕೆ ಮಾತ್ರವೇ ಸೀಮಿತಗೊಳ್ಳದೆ ಸಂಗೀತಜ್ಞರಿಗೆ, ನೃತ್ಯಪಟುಗಳಿಗೆ ನಟರಿಗೆ, ಚಿತ್ರಕಾರರಿಗೆ ಸ್ಫೂರ್ತಿಸಲೆಯ ಪಾವನ ಗಂಗೋತ್ರಿಯಾಗಿದೆ; ಅವರ ಸಾಧನಾ ಕ್ಷೇತ್ರದ ಗಮ್ಯವಾಗಿದೆ. ಅವರ ಮನಸ್ಸಿಗೆ ಆನಂದದ ಸುಧೆಯನ್ನು ಎರೆಯಬಲ್ಲ ಕಾಮಧೇನುವಾಗಿದೆ.

ಸಂಸ್ಕೃತ ಭಾಷೆಯಲ್ಲಿ ಇದು ಅತ್ಯಂತ ಕಿರಿಯದಾದ ಪ್ರಬಂಧಕಾವ್ಯ. ಆದರೆ ಅದು ಅಖಂಡವಾದ ಪ್ರಸಿದ್ಧಿಯನ್ನು ಗಳಿಸಿದೆ. ನಂತರದಲ್ಲಿ ಬಂದ ಕವಿಗಳಿಗೆ ಪ್ರೇರಣೆಯನ್ನು, ಅವರ ರಚನೆಗಳಿಗೆ ಸ್ಫೂರ್ತಿಯನ್ನು ನೀಡಿದೆ. ಕವಿಗಳನ್ನು, ಕಲಾವಿದರನ್ನು ಬಹುವಾಗಿ ಆಕರ್ಷಿಸಿದೆ. ಕಾವ್ಯದ ಉದ್ದೇಶ ರಾಧಾಕೃಷ್ಣರ ಪ್ರಣಯ ಗಾಯನ. ಆದ್ದರಿಂದಲೇ ಮಧುರ ಭಕ್ತಿಯ ಪರಾಕಾಷ್ಠತೆ ಇಲ್ಲದೆ. ಇದರ ಇತಿವೃತ್ತವನ್ನು ಕಾಳಿದಾಸನ ಋತು ಸಂಹಾರ, ಮೇಘದೂತ ಮುಂತಾದ ಕಾವ್ಯಗಳೊಂದಿಗೆ ಹೋಲಿಸಬಹುದು. ಶೃಂಗಾರ ರಸ ಪೋಷಣೆಯಲ್ಲಿ ಬಿಲ್ಹಣನ ಚೌರಪಂಚಶಿಖ ಕಾವ್ಯಕ್ಕೆ ಸರಿಸಾಟಿಯಾಗಿಯೇ ಇದೆ. ನಾಯಕ-ನಾಯಕಿಯರ ಪ್ರಣಯ, ಸಂಭೋಗ ಮತ್ತು ವಿಪ್ರಲಂಭ ಶೃಂಗಾರದ ಪೋಷಣೆಯು ಅತ್ಯಂತ ರಮಣೀಯವಾಗಿದೆ. ಈ ಕಾವ್ಯವು ಅವರ್ಣನೀಯವಾದ ಒಂದು ಶೈಲಿಯನ್ನು, ನಾಟಕೀಯತೆಯನ್ನು ಮಿಳಿತಗೊಳಿಸಿಕೊಂಡಿರುವ ರೂಪಕ.

ಗೀತಗೋವಿಂದ ಕಾವ್ಯವು ೧೨ ಸರ್ಗಗಳನ್ನು, ೨೪ ಅಷ್ಟಪದಿಗಳನ್ನು, ೭೨ ವರ್ಣನಾತ್ಮಕ ಶ್ಲೋಕಗಳನ್ನು ಪಡೆದುಕೊಂಡಿದೆ. ಬೃಂದಾವನದಲ್ಲಿ ರಾಧಾಕೃಷ್ಣರ ಪ್ರಣಯಲೀಲೆಗೆ, ಪ್ರಣಯ ಕ್ರೀಡೆಗೆ ಸಂಬಂಧಿಸಿರುವ ಬಹು ಸುಂದರ ಕಥೆ. ಅಂದಿನಿಂದ ಇಂದಿನವರೆವಿಗೂ ಪ್ರೇಮಿಗಳಿಗೆ ರಸರಮ್ಯ ವರ್ಣನಾತೀತ ರಾಗ ಪ್ರಹೇಳಿಕೆಯಾಗಿ ಉಳಿದಿದೆ.

ಗೀತ ಗೋವಿಂದ ಕಾವ್ಯವನ್ನು ಅನುಸರಿಸಿ ಸಂಸ್ಕೃತ ಭಾಷೆಯಲ್ಲಿಯೇ ಹನ್ನೆರಡಕ್ಕೂ ಹೆಚ್ಚು ಕಾವ್ಯಗಳು ರಚಿತಗೊಂಡು ಪ್ರಕಟವಾಗಿವೆ. ಅವುಗಳಲ್ಲಿ ಭಾನುದತ್ತನ 'ಗೀತಗೌರೀಪತಿ', ಕಲ್ಹಣನ 'ಗೀತ ಗಂಗಾಧರ', ರಾಮಭಟ್ಟನ 'ಗೀತ ಗಿರೀಶ', ವಂಶಮಣಿಯ 'ಗೀತ ದಿಗಂಬರ', ಹರಿಶಂಕರನ 'ಗೀತಾರ್ಥ' ಹೀಗೆ ಪಟ್ಟಿ ಮಾಡಬಹುದಾದರೂ ಯಾವುವೂ ಗೀತಗೋವಿಂದದ ಛಾಯೆಗೂ ನಿಲುಕಿಲ್ಲ. ಕೇವಲ ಕೃತಿಗಳಾಗಿ ಅವು ಉಳಿದಿವೆಯಷ್ಟೇ! ಎಂದರೆ ಇಂದಿಗೂ 'ಗೀತಗೋವಿಂದ'ವು ಅದ್ವಿತೀಯವಾಗಿಯೇ ಉಳಿದಿದೆ.



ಇಂತಹ ವಿಶಿಷ್ಟ ಕಾವ್ಯವು ದೇವಾಲಯಗಳಲ್ಲಿ ಗಾಯನ, ನೃತ್ಯ ಸೇವೆಯ ಮೂಲಕ ರಾಧಾಕೃಷ್ಣರ ಸೇವೆಯಲ್ಲಿ ಇಂದೂ ತೊಡಗಿಸಿಕೊಂಡಿದ್ದರೂ ಏನು ಕಾರಣವೋ ಶಿಲ್ಪದ ರೂಪವನ್ನು ಪಡೆದುಕೊಂಡಿರುವುದನ್ನು ಭಾರತೀಯ ಕಲಾ ಇತಿಹಾಸವು ದಾಖಲಿಸಿರುವುದು ಕಂಡುಬಂದಿಲ್ಲ.

ಪ್ರಸ್ತುತ ಪ್ರಯತ್ನ ಗೀತಗೋವಿಂದದಿಂದ ಆಯ್ಕೆಮಾಡಿರುವ ಹದಿನಾಲ್ಕು ಶ್ಲೋಕಗಳನ್ನು ಮರದ ಮಾಧ್ಯಮದಲ್ಲಿ ಉಬ್ಬುಶಿಲ್ಪ ರೂಪದಲ್ಲಿ ಅಭಿವ್ಯಕ್ತಿಗೊಳಿಸಿದೆ. ಪ್ರತಿ ಶಿಲ್ಪದ ಹಿನ್ನೆಲೆಯನ್ನು ಪರಿಚಯಿಸಿ ಶ್ಲೋಕವನ್ನು ನೀಡಿ ಅದರ ತಾತ್ಪರ್ಯವನ್ನು ನೋಡುಗರ ಪ್ರಯೋಜನಾರ್ಥ ಒದಗಿಸಿದೆ. ಗೀತಗೋವಿಂದದ ವಿಸ್ತೃತ ಪರಿಚಯ ಇಲ್ಲದವರಿಗೆ ಈ ವಿವರಣೆಯು ಶಿಲ್ಪವನ್ನು ಅರ್ಥೈಸಿಕೊಳ್ಳಲು ನೆರವಾಗಲಿ ಎಂಬುದು ನಮ್ಮ ಉದ್ದೇಶ.

'ಸಂಪ್ರದಾಯಿಕ ಶಿಲ್ಪ ಎಂಬುದು ಶಾಸ್ತ್ರದಿಂದ ಬಂಧಿತವಾಗಿದೆ. ಆದ್ದರಿಂದ ಸೃಜನ ಶೀಲತೆ ಎಂಬುದು ಅಲ್ಲಿ ಮೃಗ್ಯ. ಅದರಲ್ಲಿ ಹಳೆಯ ಶಿಲ್ಪದ 'ಕಾಪಿ' ಬಿಟ್ಟರೆ ಬೇರೇನು ತಾನೇ ಸಾಧ್ಯ?' ಎಂದು ತೀರ್ಮಾನಿಸಿರುವ, ನಂಬಿರುವ ಬುದ್ಧಿವಂತ ಸಮಕಾಲೀನ ಕಲಾ ವಿಮರ್ಶಕರು ಸಾಂಪ್ರದಾಯಿ ಶಿಲ್ಪವನ್ನು ಕೇವಲ 'ಕ್ರಾಫ್ಟ್' (ಕರ ಕುಶಲ ವಸ್ತು) ಎಂದು ನಿರ್ಣಯವನ್ನು ಹೇಳಿದ್ದಾರೆ, ಅದೇ ಪರಿಗಣನೆಯು ರೂಢಿಯಲ್ಲೂ ವ್ಯಾಪಕವಾಗಿದೆ. ಐರೋಪ್ಯ ಮೂಲ ಹೊಂದಿರುವ ಸಮಕಾಲೀನ ಕಲೆ ಮಾತ್ರವೇ ಕಲೆ ಎಂಬುದಾಗಿ ನಮ್ಮ ಬುದ್ಧಿಜೀವಿ ವರ್ಗದವರು ವ್ಯವಹರಿಸುತ್ತಲೂ ಇದ್ದಾರೆ. ಅದೇ ನಂಬಿಕೆಯನ್ನು ವ್ಯಾಪಕವಾಗಿ ಹರಡುತ್ತಲೂ ಇದ್ದಾರೆ.

ಸಾಂಪ್ರದಾಯಿ ಶಿಲ್ಪದ ಸೀಮೆಯ ಎಲ್ಲಾ ನಿಯಮಗಳನ್ನು ಅನುಸರಿಸಿ, ಕೇವಲ ದೇವ-ದೇವಿಯರನ್ನೇ ಚಿತ್ರಿಸಿರುವ ಈ ಶಿಲ್ಪ ಮಾಲಿಕೆಯಲ್ಲಿ ನಿರ್ಮಾಣಗೊಂಡಿರುವ ಈ ಕೃತಿಗಳಲ್ಲಿ ನಿಖರವಾಗಿ ಅಭಿವ್ಯಕ್ತಿಗೊಂಡಿರುವ ಸೃಜನಶೀಲತೆಯನ್ನು, 'ಕಲೆ'ಯನ್ನು ನೋಡಿ ಗುರುತಿಸುವ, ಅರ್ಥಮಾಡಿಕೊಳ್ಳಲು ಪ್ರಯತ್ನಿಸುವ ಗುಣಗ್ರಾಹಿಗಳಿಗೆ ಈ ಕೃತಿಗಳನ್ನು ಅರ್ಪಿಸಿದೆ. ಈ ಶಿಲ್ಪಗಳಲ್ಲಿರುವ ಕೊರತೆಗಳನ್ನು ತಿಳಿಸಿ ಮುಂದಿನ ಪ್ರಯತ್ನದಲ್ಲಿ ಸಾಂಪ್ರಾದಾಯಿಕ ತರುಣ ಶಿಲ್ಪಿಗಳು ಇನ್ನೂ ಉನ್ನತ ಮಟ್ಟದ ಕಲಾಭಿವ್ಯಕ್ತಿಯನ್ನು ತಲುಪಲು ನೆರವಾಗಬೇಕೆಂದು ವಿನಂತಿಸುತ್ತೇನೆ.

॥ ಓಂ ಶ್ರೀ ಕೃಷ್ಣಾಯ ತುಭ್ಯಂ ನಮಃ ॥

ಶುಕ್ರವಾರ
೭ ಜೂನ್ ೨೦೧೩

ಡಾ॥ ಜಿ. ಜ್ಞಾನಾನಂದ
ಅಧ್ಯಕ್ಷರು,
ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಬೆಂಗಳೂರು - ೫೬೦೦೦೨



# ಪರಿವಿಡಿ







# ೧.
# ಕೇತಕೀ ಗಂಧ ಬಂಧುಃ

## ಹಿನ್ನೆಲೆ

ಲವಂಗ ಲತೆಗಳು, ಹೂ ಗೊಂಚಲುಗಳು ಮತ್ತು ದುಂಬಿಗಳ ಗುಂಪುಗಳಿಂದ ವಿರಾಜಮಾನವಾಗಿ, ತಣ್ಣನೆಯ ಮಂದಾನಿಲ ಬೀಸುತ್ತಿದೆ. ಕೋಗಿಲೆಗಳ ರಾಗಗಳಿಂದ, ದುಂಬಿಗಳ ಝೇಂಕಾರದಿಂದ ಹೂ ಪೊದೆಗಳು ಅನುರಣಿಸುತ್ತಿವೆ. ಬಕುಳ ವೃಕ್ಷಗಳು ಅರಳಿಸಿರುವ ಹೂ ಗೊಂಚಲುಗಳಿಂದ ವಾತಾವರಣದಲ್ಲೆಲ್ಲಾ ಸುಗಂಧ ತುಂಬಿದೆ. ಮಲ್ಲಿಗೆಯ ಬಳ್ಳಿಯೂ ಹೂಗಳಿಂದ ತುಂಬಿ ವಸಂತಾಗಮನವನ್ನು ಸಾರುತ್ತಿದೆ. ಸದಾ ಕಪ್ಪಾಗಿ ಕಾಣಿಸುವ ಹೊಂಗೇ ಮರವು ಈಗ ಬೆಳಗುತ್ತಿರುವ ಚಿಗುರುಗಳಿಂದ ಅಲಂಕೃತಗೊಂಡಿದೆ. ಹೊಂಗೇ ಹೂಗಳ ಕಂಪು ವಾತಾವರಣದಲ್ಲಿ ಹರಡಿರುವಂತೆಯೇ ಹೂಗಳು ನೆಲವನ್ನೆಲ್ಲಾ ಆಕ್ರಮಿಸಿದೆ. ಕೆಂಪಾದ ಮುತ್ತುಗದ ಹೂಗಳು ಯುವಕರ ಹೃದಯಗಳನ್ನು ಸೀಳಿರುವ ಮನ್ಮಥನ ಉಗುರುಗಳೆಂಬ ಭ್ರಾಂತಿ-ವಿಭ್ರಾಂತಿಯನ್ನು ಉಂಟು ಮಾಡುತ್ತಿವಂತೆ ಕಂಗೊಳಿಸುತ್ತವೆ.

ಕತ್ತಲೆಯ ಹೊಂಗೆ ಮರಗಳು, ಮುತ್ತುಗದ ಹೂಗಳ ಸೌರಭ ಪ್ರೇಮಿಗಳಿಗೆ ಉದ್ದೀಪನ ವಿಭಾವಗಳಾಗಿವೆ. ಆ ಮರಗಳ ನೆರಳು, ಹೂಗಳು, ಅವುಗಳ ಸುಗಂಧಗಳು ಪ್ರೇಮಕ್ರೀಡಾ ವಿಶೇಷಗಳಿಗೆ ಬಹುವಾಗಿ ದೋಹದ ಕಾರಣವಾಗಿವೆ.

ನಾಗ ಕೇಸರ ಪುಷ್ಪಗಳು ಚೆನ್ನಾಗಿ ಅರಳಿದ್ದು ಮನ್ಮಥನ ಛತ್ರಿಗಳಂತೆ ಕಾಣುತ್ತಿವೆ. ಪಾದರಿ ಪುಷ್ಪಗಳು ರಾಶಿರಾಶಿಗಳಾಗಿ ಭೂಮಿಯ ಮೇಲೆ ಬಿದ್ದಿವೆ. ಅವುಗಳಲ್ಲಿರುವ ಮಕರಂದವನ್ನು ಹೀರಲು ದುಂಬಿಗಳು ದಂಡುದಂಡುಗಳಾಗಿ ಬರುತ್ತಿವೆ. ದುಂಬಿಗಳ ವಲಯಗಳು ಮನ್ಮಥನ ಚಲಿಸುತ್ತಿರುವ ಬಾಣಗಳಂತೆ ಭಾಸವಾಗುತ್ತಿವೆ. ಇವೆಲ್ಲಾ ನಾಯಕ-ನಾಯಕಿಯರಿಗೆ ಉದ್ದೀಪನ ವಿಭಾವಗಳಾಗಿವೆ. ಇವೆಲ್ಲಾ ಈ ಮೊದಲು ಅವರು ಅನುಭವಿಸಿದ ಆಲಿಂಗನ, ಚುಂಬನಾದಿಗಳನ್ನು ಸ್ಮರಣೆಗೆ ತರುತ್ತಿವೆ.

ಪ್ರೇಮೋದ್ಭಾವಕ್ಕೆ ಕಾರಣಭೂತನಾದ ಮನ್ಮಥನನ್ನು ಕಾಮದೇವ (ರತ್ಯೋದ್ಭವಕಾರಣನು), ಕಂದರ್ಪ (ಕಾಮೋದ್ಭವಕಾರಣನು). ಮದನ (ಕಣ್ಣಿಗೆ ಕಾಣಿಸದೆ ಪುಷ್ಪಬಾಣಗಳನ್ನು ಹಾಕುತ್ತಿರುವವನು), ಮನಸಿಜ (ಮನಸ್ಸಿನಲ್ಲಿಯೇ ಹುಟ್ಟುವನು) ಎಂಬುದಾಗಿ ಹಲವು ಬಗೆಗಳಲ್ಲಿ ಕವೀಶ್ವರರು ಸ್ಮರಿಸಿ ತೃಪ್ತರಾಗಿದ್ದಾರೆ.



ಕೇದಿಗೆಯ ಹೂಗಳ ಸಮುದಾಯ ಪರಿಪೂರ್ಣವಾಗಿ ಪುಷ್ಪಿಸಿ ಪರಾಗರೇಣುಗಳನ್ನು ಗಾಳಿಯಲ್ಲಿ ತೂರಿ ಬಿಡುತ್ತಿವೆ. ಆ ಗೊಂಚಲುಗಳ ತುದಿಗಳು ಮನ್ಮಥನ ಬಾಣಗಳಾಗಿ ವಿಯೋಗಿಗಳ ಹೃದಯವನ್ನು ಸೀಳುತ್ತಿವೆ. ಮಂದಾನಿಲದಲ್ಲಿ ಪರಾಗ ರೇಣುಗಳು ತೆರೆಗಳಾಗಿ ರೂಪಿತಗೊಂಡು ಅವರನ್ನು ಆವರಿಸುತ್ತಿವೆ.

ನವವಸಂತದ ಅಟ್ಟಹಾಸ ಅದ್ಭುತವಾಗಿದೆ. ಹೂ ತುಂಬಿರುವ ಮಾವಿನಗಿಡದ ಸೊಗಸು, ಅದನ್ನು ಬಳಸಿಕೊಂಡು ಹಬ್ಬಿರುವ ಲತೆಗಳಲ್ಲಿ ಅರಳಿನಿಂತಿರುವ ಹೂಗಳ ಅಂದ ನೋಡುತ್ತಲೇ ಹೂಗಳ ಚಂದಕ್ಕೋ, ಲತೆಯ ಸುತ್ತಿ ಬಳಸಿರುವ ಪರಿಗೋ ಆ ಮಾವಿನಗಿಡವು ಪ್ರೇಯಸಿಯ ಅಪ್ಪುಗೆಯ ಸುಖವನ್ನು ಅನುಭವಿಸುತ್ತಿರುವ ನಾಯಕನಂತೆ ಪುಳಕಿತಗೊಂಡು ನಿಂತಿರುವಂತೆ ಭಾಸವಾಗುತ್ತಿದೆ.

ಯಮುನಾ ನದಿಯಲ್ಲಿ ತೇಲಾಡುತ್ತಿರುವ ಅಲೆಗಳು, ತೀರದಲ್ಲಿ ಕಾಣುತ್ತಿರುವ ಮರಳಿನ ದಿಬ್ಬಗಳು ಹುಣ್ಣಿಮೆಯ ರಾತ್ರಿಗಳಲ್ಲಿ ಮಿಥನಗಳ ಆಲಿಂಗನ ಸ್ಪರ್ಶಕ್ಕಾಗಿ ಮನೋಹರವಾಗಿ ಸಜ್ಜಾಗಿರುವಂತೆ ಭಾಸವಾಗುತ್ತಿವೆ.





# ನೆಲೆ

**ದರ ವಿದಳಿತ ಮಲ್ಲೀವಲ್ಲಿ ಚಂಚತ್ಪರಾಗ**
**ಪ್ರಕಟಿತ ಪಟವಾಸೈರ್ವಾ ಯ ನ್ಕಾನನಾನಿ।**
**ಇಹ ಹಿ ದಹತಿ ಚೇತಃ ಕೇತಕೀಗಂಧ್ರ ಬಂಧುಃ**
**ಪ್ರಸರ ದಸಮಬಾಣ ಪ್ರಾಣವದ್ಗಂಧವಾಹಃ॥**

**– ಗೀತಗೋವಿಂದ, ಅಷ್ಟಪದಿ, ೩:೬**

ವಸಂತಕಾಲದಲ್ಲಿ ಸ್ವಲ್ಪವಾಗಿ ವಿಕಸಿಸಿರುವ ಮಲ್ಲಿಗೆ ಮತ್ತು ಇತರ ಹೂಗಳು ಪರಾಗ ಮತ್ತು ಸುಗಂಧವನ್ನು ಬೀರುವ ಕೇಂದ್ರಗಳಾಗಿವೆ. ದಟ್ಟವಾದಂತೆ ಕೇದಿಗೆಯ ಹೂವಿನ ವಾಸನೆಯು ಕಾಡೆಲ್ಲಾ ಪರಿಮಳಿಸುವಂತೆ ಮಾಡಿ, ಯೌವ್ವನವಂತರಲ್ಲಿ ಮನ್ಮಥ ವಿಕಾರಗಳನ್ನು ಪ್ರೇರೇಪಿಸುತ್ತಿದೆ.

ಎಲ್ಲಾ ದಿಕ್ಕುಗಳಲ್ಲೂ ಸಂಚರಿಸುತ್ತಾ ಎಲ್ಲಾ ಕಡೆಗಳಲ್ಲೂ ಪರಿಮಳವನ್ನು ಪ್ರಸರಿಸುತ್ತಿರುವ ಪರಾಗಧೂಳು ದಟ್ಟವಾಗಿ ತೆರೆಗಳಾಗಿ ರೂಪುಗೊಂಡಿದ್ದು ಶೃಂಗಾರ ಮಿಥುನಗಳಿಗೆ ಪಟಗಳಂತೆ ವ್ಯಾಪಿಸಿ ಅವರ ವ್ಯಾಪಾರಕ್ಕೆ ರಹಸ್ಯತೆಯ ಆವರಣವನ್ನು ಕಲ್ಪಿಸಿದೆ. ಮನ್ಮಥನ ಪ್ರಾಣ ವಾಯುವಿನಂತೆ ಇರುವ ಮಲಯ ಮಾರುತವು ವಿರಹಿಜನರ ಹೃದಯಗಳನ್ನು ಸುಡುತ್ತಿದೆಯಲ್ಲವೇ?

ಈ ಅಷ್ಟಪದಿಯು **ಲಲಿತ ಲವಂಗ ಲತಾ ಪರಿಶೀಲನ ಕೋಮಲ ಮಲಯ ಸಮೀರೇ**...... ಎಂದು ಪ್ರಾರಂಭವಾಗಿ ವಾತಾವರಣದಲ್ಲಿರುವ ಮಲಯ ಸಮೀರವೇ ವಸಂತದ ಗಂಧವನ್ನು ಹರಡಿ, ಪರಾಗಧೂಳನ್ನು ತೂರಿಬಿಟ್ಟು ಮದನನಿಗೆ ಆಹ್ವಾನ ನೀಡುತ್ತಿದೆ ಎಂಬುದನ್ನು ವಿವರಿಸುತ್ತಾ ಕೊನೆಯಲ್ಲಿ ಅದೇ ಮಲಯ ಸಮೀರವೇ ಮನ್ಮಥನ ಪ್ರಾಣವಾಯುವಾಗಿ ದೃಢಗೊಂಡಿದೆ ಎಂದು ವಿಪ್ರಲಂಭ ಶೃಂಗಾರವನ್ನು ಕವಿಯು ಬಲಗೊಳಿಸಿದ್ದಾನೆ.






# ೨.

# ಸಜಲ ನಳಿನೀದಳ ಜಾಲಂ

## ಹಿನ್ನೆಲೆ

ರಾಧಾ ಮಾಧವರಿಬ್ಬರೂ ಮನ್ಮಥಾವಸ್ಥೆಯನ್ನು ಸಮಾನವಾಗಿ ಅನುಭವಿಸುತ್ತಾ ಬೇರೆ ಬೇರೆಯಾಗಿ ಇದ್ದಾರೆ.

ಯಮುನಾ ತೀರದಲ್ಲಿ ಹಸಿರಾಗಿರುವ ಲತಾ ಗೃಹವೊಂದಿದೆ. ಅದರಲ್ಲಿ ಕೃಷ್ಣನು ಮನ್ಮಥನ ಶರಾಘಾತದಿಂದ ಬಳಲಿ ರಾಧೆಯನ್ನು ನೆನಪಿಸಿಕೊಳ್ಳುತ್ತಾ, ಆಕೆಯ ದರ್ಶನ ಭಾಗ್ಯಕ್ಕಾಗಿ, ಆಕೆಯ ಕಟಾಕ್ಷ ವೀಕ್ಷಣೆಗಾಗಿ ಪರಿತಪಿಸುತ್ತಾ ಇದ್ದಾನೆ. ಅಂತಹ ಕೃಷ್ಣನನ್ನು ರಾಧೆಯ ಸಖಿಯು ಸಮೀಪಿಸಿ ಹೀಗೆ ಹೇಳುತ್ತಾಳೆ–

ಶ್ರೀಕೃಷ್ಣಾ ನೀನೊಬ್ಬನೇ ಮನ್ಮಥನ ಬಾಣಗಳಿಂದ ಪೀಡಿತನಾಗಿದ್ದೀಯೇ ಎಂದು ಕೊಂಡಿದ್ದಿಯೇನೋ! ಸುಕುಮಾರಿಯಾದ ಆ ರಾಧೆಯ ಸ್ಥಿತಿಯು ಇನ್ನೂ ಭಯಂಕರವಾಗಿದೆ. ಮನ್ಮಥನ ಪೀಡನೆಯನ್ನು ತಪ್ಪಿಸಿಕೊಳ್ಳಬೇಕೆಂದು ನಿನ್ನ ಹೃದಯದಲ್ಲಿ ಅಡಗಿದ್ದಾಳೆ. ನಿನ್ನ ವಿಯೋಗದಿಂದ ಅತ್ಯಂತ ದೈನ್ಯಳಾಗಿದ್ದಾಳೆ. ಈಗ ಮನ್ಮಥೋದ್ದೀಪನಕ್ಕೆ ನೆರವಾಗುವ ಚಂದನ ಮುಂತಾದುವನ್ನು ದ್ವೇಷಿಸುತ್ತಾಳೆ. ಪೂರ್ಣಚಂದ್ರನನ್ನು ದೂಷಿಸುತ್ತಾಳೆ. ಪರಿಮಳವನ್ನು, ಚಂದನದ ಗಂಧವನ್ನು ಹೊತ್ತು ತರುತ್ತಿರುವ ಮಲಯ ಮಾರುತನನ್ನು ವಿಷವಾಯುವೆಂದು ಭಾವಿಸುತ್ತಾಳೆ. ಹೀಗೆ ರಾಧಾ ರಾಣಿಯು ವಿರಹೋತ್ಕಂಠಿತೆ ಯಾಗಿದ್ದಾಳೆ. ಸದಾ ನಿನ್ನನ್ನು ತನ್ನ ಹೃದಯದಲ್ಲಿರುವಂತೆಯೇ ಕಲ್ಪಿಸಿಕೊಂಡು ವರ್ತಿಸುತ್ತಾಳೆ...

ಸಖಿಯು ರಾಧೆಯ ಸ್ಥಿತಿಯ ವರ್ಣನೆಯನ್ನು ಮುಂದುವರಿಸುತ್ತಾಳೆ.



## ನೆಲೆ

ಅವಿರಳ ನಿಪತಿತ ಮದನಶರಾ
　ದಿವ ಭವದವನಾಯ ವಿಶಾಲಮ್ ।
ಸ್ವಹೃದಯ ಮರ್ಮಣಿ ವರ್ಮ ಕರೋತಿ
　ಸಜಲ ನಳಿನೀದಳ ಜಾಲಮ್ ॥
ಸಾವಿರಹೇ ತವ ದೀನಾ॥....

– ಗೀತಗೋವಿಂದ, ಅಷ್ಟಪದಿ, ೮:೯

ಎಲೈ, ಕೃಷ್ಣನೇ ಆ ರಾಧೆಯು ತನ್ನ ಮೇಲೆ ಮನ್ಮಥನು ಪುಷ್ಪಬಾಣಗಳ ಸುರಿಮಳೆಯನ್ನು ಒಂದೇ ಸಮನೆ ಸುರಿಸುತ್ತಿದ್ದರೂ ಆಕೆಗೇ ನಿನ್ನ ಮೇಲೇ ಅತೀವವಾದ ಪ್ರೀತಿ. ತನ್ನ ಹೃದಯದಲ್ಲಿರುವ ನಿನಗೆ ಆ ಬಾಣಗಳಿಂದ ಅಪಾಯ ಉಂಟಾಗುತ್ತದೆ ಎಂಬ ಭಯದಿಂದ ನಿನ್ನ ರಕ್ಷಣೆಗಾಗಿ ತನ್ನ ಹೃದಯಸ್ಥಾನಕ್ಕೆ ನೀರನ್ನು ಹೊಂದಿರುವ ವಿಶಾಲವಾದ ತಾವರೆಯ ಎಲೆಗಳನ್ನೆಲ್ಲಾ ಒಟ್ಟುಮಾಡಿಗೊಂಡು ಕವಚವನ್ನಾಗಿ ಧರಿಸಿದ್ದಾಳೆ. ಇದರಿಂದ ಆಕೆಯಲ್ಲಿ ಪ್ರಜ್ವಲಿಸುತ್ತಿರುವ ವಿರಹಾಗ್ನಿಯು ಉಪಶಮನಗೊಳ್ಳುತ್ತದೆ ಎಂದೇನು ಭಾವಿಸಬೇಡ. ನಿನ್ನ ವಿಯೋಗವನ್ನು ತೀವ್ರವಾಗಿ ಅನುಭವಿಸುತ್ತಾ ನಿನ್ನ ರಕ್ಷಣೆಯ ಚಿಂತೆಯಲ್ಲಿ ರಾಧೆಯು ಅತ್ಯಂತ ದೀನಳಾಗಿದ್ದಾಳೆ. ನಿನ್ನ ಕಮಲನಯನಗಳನ್ನು, ಕಾಮರಸ ದಿಂದ ಉಕ್ಕುತ್ತಿರುವ ನಿನ್ನ ತುಟಿಗಳನ್ನು, ಮನೋಹರವಾದ ಪಾದಗಳನ್ನು ನೆನಪಿಸಿ ಕೊಳ್ಳುತ್ತಾ ಮತ್ತಷ್ಟು ತೀವ್ರ ವಿರಹವನ್ನು ರಾಧೆ ಅನುಭವಿಸುತ್ತಿದ್ದಾಳೆ. ಆದರೂ ಮನ್ಮಥನು ಮಾತ್ರ ಹೃದಯಹೀನನಾಗಿ ಪುಷ್ಪಬಾಣಗಳನ್ನು ರಾಧೆಯ ಮೇಲೆ ಒಂದೇ ಸಮನೆ ಎಸೆಯುತ್ತಲೇ ಇದ್ದಾನೆ.









# ೩

# ಶ್ಲಿಷ್ಯತಿ ಚುಂಬತಿ ತಿಮಿರಂ

## ಹಿನ್ನೆಲೆ

ಸಖಿಯು ಶ್ರೀಕೃಷ್ಣನ ಬಳಿಗೆ ಬಂದು ತನ್ನ ಸ್ವಾಮಿನಿ ರಾಧಾರಾಣಿಯನ್ನು ನೀವೇ ಬಂದು ಕಾಪಾಡಬೇಕೆಂದು ಬೇಡುತ್ತಾ ಹೀಗೆ ಹೇಳುತ್ತಾಳೆ : ನಾಥ ಹರೇ ಜಗನ್ನಾಥ ಹರೇ. ಈ ಜಗತ್ತಿನಲ್ಲಿ ನನ್ನ ಸ್ವಾಮಿಯನ್ನು ಕಾಪಾಡಬಲ್ಲವರು ನೀವೊಬ್ಬರೇ. ನಿಮಗಾಗಿ ಬಳ್ಳಿಮಾಡದಲ್ಲಿ ರಾಧಾರಾಣಿಯು ಕಾಯುತ್ತಾ ಇದ್ದಾಳೆ. ಪ್ರೇಮೋನ್ಮಾದದಲ್ಲಿ ಎಲ್ಲಾ ಕಡೆಯೂ ನಿಮ್ಮನ್ನೇ ನೋಡುತ್ತಿದ್ದಾಳೆ. ಆದರೂ ತನ್ನ ಕೃಷ್ಣನಿಗಾಗಿ ಬೃಂದಾವನವನ್ನೆಲ್ಲಾ ಹುಡುಕುತ್ತಿದ್ದಾಳೆ. ಈಗ ಇನ್ನು ಒಂದು ಹೆಜ್ಜೆಯನ್ನೂ ಮುಂದೆ ಇರಿಸಲಾರದಷ್ಟು ಸೋತಿದ್ದಾಳೆ. ನೀವು ಇತರ ಗೋಪಿಯರ ಅಪ್ಪುಗೆಯಲ್ಲಿ ತನ್ನನ್ನು ಮರೆತಿದ್ದೀರಿ ಎಂದು ಕಲ್ಪಿಸಿಕೊಂಡು ಪ್ರೇಮಜ್ವರದಿಂದ ಬಳಲಿದ್ದಾಳೆ. ರಾಧೆಯ ಮೈ-ಮನಸ್ಸುಗಳೆರಡು ಪ್ರತ್ಯೇಕಗೊಂಡಿವೆ. ಎರಡೂ ಭಿನ್ನವಾಗಿ ಕೆಲಸ ಮಾಡುತ್ತಿರುವುದರಿಂದ ರಾಧೆಯು ಇಲ್ಲಿಗೆ ಬರಲು ಅಶಕ್ತಳಾಗಿದ್ದಾಳೆ.

ಹೇಗೋ ಪ್ರಯತ್ನಿಸಿ ನಿಮ್ಮನ್ನು ಕಾಣಲು ರಾಧೆ ಹೊರಟಳು. ಆದರೆ ಎರಡು ಹೆಜ್ಜೆಯನ್ನೂ ಇರಿಸಲಾರದೆ ಕುಸಿದು ಬಿದ್ದಳು. ತನ್ನ ತೀವ್ರತರವಾದ ಪ್ರೇಮ ತಪಸ್ಸಿನ ಫಲವಾಗಿ ಎಲ್ಲಾ ಕಡೆ ನಿಮ್ಮನ್ನೇ ನೋಡುತ್ತಿದ್ದಾಳೆ. ಆಕೆಯ ಮೈ ಮರಗಟ್ಟಿದೆ. ನೀವು ಬಂದು ಪ್ರೇಮಸುಧೆಯನ್ನು ಹರಿಸುತ್ತೀರಿ, ತನ್ಮೂಲಕ ಆಕೆಯನ್ನು ಕಾಪಾಡುತ್ತೀರಿ ಎಂಬುದಾಗಿ ಕಾಯುತ್ತಿದ್ದಾಳೆ.

ವಿರಹಾಗ್ನಿಯಲ್ಲಿ ತಪಿಸುತ್ತಿರುವ ರಾಧೆಯು ಈ ವ್ಯಥೆಯಿಂದ ಹೊರ ಬರಲು ತನ್ನ ಪ್ರಯತ್ನವನ್ನು ತಾನು ಮಾಡುತ್ತಲೇ ಇದ್ದಾಳೆ. ತಾವರೆಯ ದಂಟುಗಳ ಕಂಕಣಗಳನ್ನು ಧರಿಸಿದ್ದಾಳೆ. ತಾವರೆಯ ಹೂಗಳಿಂದ ರಚಿತವಾಗಿರುವ ಹಾಸಿನ ಮೇಲೆ ಮಲಗಿ ನಿಮ್ಮೊಂದಿಗೆ ಇತಃಪೂರ್ವ ತಾನು ಅನುಭವಿಸಿರುವ ರತಿ ವಿಲಾಸಗಳನ್ನು ನೆನಪಿಸಿಕೊಂಡು ನೀವು ಬರುತ್ತೀರಿ ಎಂಬ ಆಸೆಯಿಂದ ಕೊನೆಯುಸಿರನ್ನು ಹಿಡಿದು ಕಾಯುತ್ತಾ ಇದ್ದಾಳೆ. ಜಗನ್ನಾಥರಾಗಿರುವ ನೀವು ಮಾತ್ರವೇ ಆಕೆಯ ಆ ತಾಪವನ್ನು ಪರಿಹರಿಸಬಲ್ಲಿರಿ.



ಸ್ವಾಮಿ, ರಾಧಾರಾಣಿಯ ಪ್ರಾಣವು ನಿಮ್ಮ ಪ್ರಾಣವನ್ನು ಸೇರಿಕೊಂಡಿದೆ. ತಮ್ಮ ಸುರತಕ್ರೀಡೆಗೆ ಅಲಂಕಾರ-ಆಭರಣಗಳು ಅನುವಾಗಿದೆಯೇ ಇಲ್ಲವೇ ಎಂಬುದನ್ನು ಬಾರಿಬಾರಿಗೂ ಪರೀಕ್ಷಿಸುತ್ತಿರುತ್ತಾಳೆ. ಮರುಕ್ಷಣವೇ 'ನಾನೇ

ಕೃಷ್ಣ' ಎಂಬ ಭ್ರಮೆಯಲ್ಲಿ ಬಿದ್ದು ಪುರುಷನಿಗೆ ತಕ್ಕ ಅಲಂಕಾರವನ್ನು ಮಾಡಿಕೊಳ್ಳುತ್ತಾಳೆ. ಬಾರಿಬಾರಿಗೂ ತನ್ನ ವಸ್ತ್ರ-ಆಭರಣ ಅಲಂಕಾರವನ್ನು ಮತ್ತೆ ಮತ್ತೆ ಬದಲಿಸುತ್ತಾ ಕಾಲಕ್ಷೇಪಮಾಡುತ್ತಿದ್ದಾಳೆ.

ಶ್ರೀಕೃಷ್ಣನಿಗಾಗಿ ಪರಿತಪಿಸುತ್ತಿರುವ ರಾಧಾರಾಣಿಯು 'ಸಖೀ ನನ್ನ ಶ್ರೀಕೃಷ್ಣನು ತಾನೇ ಬರುವೆನೆಂದು ಹೇಳಿರುವ ಈ ಬಳ್ಳಿಮಾಡಕ್ಕೆ ಸಮಯ ಮೀರಿದರೂ ಯಾಕೆ ಬಂದಿಲ್ಲ?' ಎಂದು ವ್ಯಂಗ್ಯವಾಗಿ ಬಾರಿ ಬಾರಿಗೂ ಕೇಳುತ್ತಿದ್ದಾಳೆ. ಈ ಕಾಲವನ್ನು ಇನ್ನೊಬ್ಬ ಗೋಪಿಗೆ ಕೊಟ್ಟಿದ್ದೀರಿ ಎಂಬ ಅನುಮಾನವು ರಾಧೆಗೆ ಬಹುವಾಗಿದೆ. ರಾತ್ರಿಕಾಲವು ಕಳೆದುಹೋಗುತ್ತಿದೆ ಎಂಬ ಕಳವಳವೂ ಆಕೆಯಲ್ಲಿದೆ.









ଶ୍ଳିଷ୍ୟତି ଚୁମ୍ବତି ତିମିରଂ

# ನೆಲೆ

**ಶ್ಲಿಷ್ಯತಿ ಚುಂಬತಿ ಜಲಧರ ಕಲ್ಪಮ್।**
**ಹರಿ ರುಪಗತ ಇತಿ ತಿಮಿರ ಮನಲ್ಪಮ್॥**
**ನಾಥ ಹರೇ ಜಗನಾಥ ಹರೇ**
**ಸೀದತಿ ರಾಧಾ ವಾಸಗೃಹೇ॥**

– ಗೀತಗೋವಿಂದ, ಅಷ್ಟಕ ೧೨:೩



ಎಲೈ ಸ್ವಾಮಿಯೇ, ರಾಧೆಯು ನಿಮಗಾಗಿ ಸಂಕೇತಸ್ಥಾನದಲ್ಲಿ ಬಂದು ಕಾಯುತ್ತಾ ಇದ್ದರೂ ಕಠಿಣ ಹೃದಯರೂ, ಪಶುಪ್ರಾಯರೂ ಆಗಿರುವ ನೀವು ಇನ್ನೂ ಇಲ್ಲಿಯೇ ಇದ್ದೀರಿ!. ಅವಳ ದೈನ್ಯ ಸ್ಥಿತಿಯನ್ನು, ಅದ್ಭುತ ಭ್ರಾಂತಿಯನ್ನು ನೋಡಿದ್ದಿರಾ? ಆದ್ದರಿಂದ ನಾಥ ಹರೇ (ಮೂಗು ದಾರ ಹಾಕಿಸಿಕೊಂಡಿರುವ ಎತ್ತು ಎಂದರೆ ಮೂಗುದಾರ ಹಿಡಿದವರ ವಶವರ್ತಿಯಾಗಿರುವ ಪಶು ಅಮಾನವೀಯ ವ್ಯಕ್ತಿ) ಎಂಬ ಹೋಲಿಕೆಯು ನಿಮಗೆ ಸೂಕ್ತವಾದುದೇ. ರಾಧೆ ಮಾತ್ರ ಬಳ್ಳಿ ಮಾಡದ ವಾಸಸ್ಥಾನದಲ್ಲಿ ದುಃಖವನ್ನು ಅನುಭವಿಸುತ್ತಾ ಇದ್ದಾಳೆ.

ಎಲೈ ಕೃಷ್ಣನೇ, ರಾಧೆಯು ನಿಮ್ಮೆಡೆಗೆ ಬರಬೇಕೆಂದು ಬಳ್ಳಿಮಾಡದ ಮನೆಯಿಂದ ಹೊರಕ್ಕೆ ಬರಲು ಮುಂಬಾಗಿಲಿನ ಬಳಿಗೆ ಬಂದಳು. ಕಾರ್ಮೋಡದ ಅಂಧಕಾರವನ್ನೇ ನೀವೆಂದು ಭ್ರಮಿಸಿದ ರಾಧೆಯು ಅದನ್ನೇ ಅಪ್ಪಿ ಚುಂಬಿಸಿದಳು. ಶ್ರೀಕೃಷ್ಣನು ಕಪ್ಪು ಎಂಬುದರೊಂದಿಗೆ ರಾಧೆಯ ಚಿತ್ತವ್ಯಾಕುಲತೆ ಮತ್ತು ವಿಪ್ರಲಂಭ ಶೃಂಗಾರದ ಪರಾಕಾಷ್ಠ ಸ್ಥಿತಿಯಲ್ಲಿ ಮೂಡಿದ ಭ್ರಾಂತಿಯ ಪ್ರೇಮೋನ್ಮಾದ ಇದು. ಭ್ರಾಂತಿ ಎಂಬ ಸ್ಥಾಯೀಭಾವದಲ್ಲಿ ಪ್ರೇಮೋನ್ಮಾದ ಎಂಬ ವ್ಯಭಿಚಾರೀ ಭಾವವನ್ನು ಇಲ್ಲಿ ವಿವರಿಸಿದೆ.









# ೮

# ರಸ ಜಲಧಿ ನಿಮಗ್ನಾ

## ಹಿನ್ನೆಲೆ

ಸಖಿಯು ಶ್ರೀಕೃಷ್ಣನಿಗೆ ತನ್ನ ಸ್ವಾಮಿನಿಯ ಸ್ಥಿತಿಯನ್ನು ಅರಿಕೆ ಮಾಡಿಕೊಳ್ಳುತ್ತಿದ್ದಾಳೆ-

ತಾನು ಬಹು ಸಡಗರದಿಂದ ಮುತ್ತಿಟ್ಟದ್ದು ಕತ್ತಲೆಗೆ ಎಂಬುದನ್ನು ತಿಳಿದುಕೊಂಡ ರಾಧೆಯು ತನ್ನ ವರ್ತನೆಗೆ ತಾನೇ ನಾಚಿಕೊಂಡಳು. ಕಣ್ಣೀರು ಉಕ್ಕಿತ್ತು. ಯಾವ ಸಮಯದಲ್ಲಾದರೂ ತನ್ನ ಪ್ರಿಯಕರನು ಬರಬಹುದು ಎಂಬುದು ನೆನಪಾಯಿತು. ಕಣ್ಣೀರನ್ನು ತಕ್ಷಣ ಒರೆಸಿಕೊಂಡು ಪ್ರಿಯಕರನನ್ನು ಸ್ವಾಗತಿಸಲು ಯೋಗ್ಯ ಆಭರಣ, ದುಕೂಲಗಳನ್ನು ಧರಿಸಿಕೊಂಡು ಹೂವಿನ ಹಾಸನ್ನು ಅಣಿಗೊಳಿಸಿದಳು. ವನಮಾಲಿಕೆಯನ್ನು ಪೋಣಿಸಿದಳು. ನಿಮಗಾಗಿ ಕಾತುರ ಚಿತ್ತಳಾಗಿ ಕಾಯುತ್ತಾ ಇದ್ದಳು. ನೀವು ಬರಲು ತಡಮಾಡುತ್ತಿದ್ದದರಿಂದ ತಾಳ್ಮೆಯನ್ನು ಕಳೆದುಕೊಂಡು ಲಜ್ಜೆಯನ್ನು ತೊರೆದು ರೋದಿಸತೊಡಗಿದಳು.

## ನೆಲೆ

ವಿಪುಲ ಪುಲಕಪಾಳಿಃ ಸ್ಫೀತ ಸೀತ್ಕಾರ ಮಂತ।
ರ್ಧ್ವನಿತ ಜಡಿಮ ಕಾಕು ವ್ಯಾಕುಲಂ ವ್ಯಾಹರಂತೀ।
ತವ ಕಿತವ ವಿಧತ್ತೇಽಮಂದ ಕಂದರ್ಪ ಚಿಂತಾಂ।
ರಸಜಲಧಿ ನಿಮಗ್ನಾ ಧ್ಯಾನಲಗ್ನಾ ಮೃಗಾಕ್ಷೀ॥

– **ಗೀತಗೋವಿಂದ, ಅಷ್ಟಪದಿ, ೧೨:೯**

ಎಲೈ ಧೂರ್ತ ಸ್ವಾಮಿಯೇ, ನೀವು ರಾಧೆಯ ಬಳಿಗೆ ಬರಲಿಲ್ಲ. ಧ್ಯಾನಸಾಗರ ಮಗ್ನತೆಯಿಂದ ನಿಮ್ಮನ್ನು ಸಮೀಪವರ್ತಿಯನ್ನಾಗಿ ಕಲ್ಪಿಸಿಕೊಂಡ ರಾಧಾರಾಣಿಯು ಅತಿಶಯವಾಗಿ ಪುಲಕಗೊಂಡಳು. ನಿಮ್ಮ ನಖಕ್ಷತಗಳನ್ನು ಅನುಭವಿಸುತ್ತಿರುವಂತೆ ಕಲ್ಪಿಸಿಕೊಂಡು ಎದುಸಿರಿಡುತ್ತಾ ವಿಕಾರ ಧ್ವನಿಯಿಂದ ದುಃಖಿತಳಾಗಿ ಮಾತನಾಡುತ್ತಿದ್ದಾಳೆ. ಧ್ಯಾನಾವಸ್ಥೆಯಲ್ಲಿ ನಿಮ್ಮ ಅಪ್ಪುಗೆಯಿಂದ ಬಿಡಿಸಿಕೊಳ್ಳಲಾರದಷ್ಟು ಅಸಮರ್ಥಳಾಗಿರುವಂತೆ ಕಲ್ಪಿಸಿಕೊಂಡು **ಕುಟ್ಟಮಿತಾ** ಎಂಬ ಮಹಾ ಅನುಭಾವ ಸ್ಥಿತಿಯನ್ನು ಪಡೆದಿದ್ದಾಳೆ. ಸೀತ್ಕಾರ ಮಾಡುತ್ತಾ ಆನಂದವಶಳಾಗಿರುವಂತೆ, ಒಡಲೇ ಅರಿಯದವಳಂತೆ, ಯಾವುದೋ ವಿಕಾರ ಸ್ವರದಲ್ಲಿ ಏನೇನೋ ಕಾಮ ವಿಚಾರಗಳನ್ನು ಹೇಳುತ್ತಾ ಆನಂದ ಸಾಗರದಲ್ಲಿ ಮುಳುಗಿದ್ದಾಳೆ. ಆ ಸುಕುಮಾರಿಯನ್ನು ನೀವು ಇನ್ನೂ ಎಷ್ಟು ಪೀಡಿಸುತ್ತೀರಿ?








# ೨೮.

# ಭೀತ ಹರಿಣೇಕ್ಷಣ

## ಹಿನ್ನೆಲೆ

ರಾಧೆಯ ಸಖಿಯು ರಾಧಾರಾಣಿ ಅನುಭವಿಸುತ್ತಿರುವ ಹಿಂಸೆಯನ್ನು ವಿವರಿಸಿ, ಶ್ರೀಕೃಷ್ಣನು ರಾಧೆಯನ್ನು ಸಮೀಪಿಸುವಂತೆ ಪ್ರೇರಿಸಲು ತನ್ನ ಪ್ರಯತ್ನವನ್ನು ಮುಂದುವರಿಸುತ್ತಿದ್ದಾಳೆ–

ಸಕಲ ಶೃಂಗಾರ ವಿಲಾಸ ಕೇಳಿಗೆ ಅನುವಾಗುವಂತಹ ಹುವ್ವಿನ ಹಾಸಿಗೆಯನ್ನು ಸಿದ್ಧಗೊಳಿಸಿದ್ದಾಳೆ. ಆದರೆ ಹುವ್ವುಗಳೆಲ್ಲಾ ಮನ್ಮಥನು ಪ್ರಯೋಗಿಸಿರುವ ಕುಸುಮ ಶರಗಳೇ. ಆದ್ದರಿಂದ ರಾಧೆಯ ಪಾಲಿಗೆ ಅದು ಕುಸುಮ ಶಯ್ಯೆಯಲ್ಲ – ಶರಶಯ್ಯೆ! ಅದರಲ್ಲಿ ಮಲಗಿ ಹಿಂದಿನ ಮಧುರ ಸ್ಮೃತಿಗಳನ್ನೆಲ್ಲಾ ನೆನಪಿಸಿಕೊಂಡು ಪರಿತಪಿಸುತ್ತಾ ಕುಸುಮ ಶರನ (ಮನ್ಮಥನ) ಹಿಂಸೆಯನ್ನು ಅನುಭವಿಸುತ್ತಾ ಇದ್ದಾಳೆ. ನೀನು ಆಕೆಯೊಂದಿಗೆ ಇದ್ದಾಗ ಮಾತ್ರವೇ ಆ ಶರತಲ್ಪವು ಸುಖತಲ್ಪವಾಗುತ್ತದೆ. ಆಕೆಯ ಸ್ಮೃತಿಮಂದಿರದ ಶೃಂಗಾರ ವಿಲಾಸಕಲೆಯು ಕಮನೀಯ ವ್ರತವಾಗುತ್ತದೆ.

ಶ್ರೀಕೃಷ್ಣಾ! ನಿನ್ನ ವಿಯೋಗ ದುಃಖದಿಂದ ರಾಧೆಯ ಕಮಲದಂತಹ ಕಣ್ಣುಗಳು ನೀರಿನಿಂದ ತುಂಬಿವೆ. ಮನ್ಮಥನ ಶರಗಳಿಂದ ಪೀಡಿತೆಯಾಗಿರುವ ರಾಧೆಯ ಮುಖ ಚಂದ್ರವು ಗ್ರಹಣಕ್ಕೆ ಗ್ರಾಸವಾಗಿರುವಂತೆ ಕಳಾಹೀನವಾಗಿದೆ. ಇಂತಹ ದುಃಖದ ಸಮಯದಲ್ಲಿ ವಿರಹಿಗಳು ಸಾಧಾರಣವಾಗಿ ನಡೆಸುವ ಕಾಮಪೂಜೆಯನ್ನು ರಾಧೆಯೂ ನಡೆಸುತ್ತಿದ್ದಾಳೆ. ಅದನ್ನು ನೀನೂ ನೋಡಬಹುದು.

ಬೃಂದಾವನದ ಏಕಾಂತ ಪ್ರದೇಶದಲ್ಲಿ ಕಸ್ತೂರಿಯಿಂದ ಮೊಸಳೆಯ ವಾಹನ ಪಡೆದಿರುವ ಮನ್ಮಥನ ಚಿತ್ರವನ್ನು ರಾಧೆಯೇ ಬರೆದಿದ್ದಾಳೆ. ಮಾವಿನ ಚಿಗುರೆಲೆಗಳಿಂದ ಮನ್ಮಥನನ್ನು ಅಲಂಕರಿಸಿ ಪೂಜಿಸಿದ್ದಾಳೆ. ಮನ್ಮಥನೇ ನನ್ನನ್ನು ಹಿಂಸಿಸದಿರು ಎಂದು ಕೈಮುಗಿದು ಬಾರಿಬಾರಿಗೂ ಪ್ರಾರ್ಥಿಸುತ್ತಿದ್ದಾಳೆ. ನಿನ್ನ ಸಾಂಗತ್ಯ ತನಗೆ ಸಿದ್ಧಿಸಲಿ ಎಂದು ಮತ್ತೆ ಮತ್ತೆ ಕೋರುತ್ತಿದ್ದಾಳೆ. ಅದರ ಸಿದ್ಧಿಗಾಗಿ ನೀನಿಲ್ಲದ ದಿನಗಳ ಲೆಕ್ಕವನ್ನು ಪ್ರಾರಂಭಿಸಿದ್ದಾಳೆ.

ಇಷ್ಟೆಲ್ಲಾ ವಿವರಿಸಿದ ತರುವಾಯವೂ ಆ ಸಖಿಗೆ ತನ್ನ ಒಡತಿಯ ನೈಜಸ್ಥಿತಿಯನ್ನು ವರ್ಣಿಸಿದ್ದೇನೆ ಎಂಬುದು ಖಚಿತವಾಗಲಿಲ್ಲ. ಆದ್ದರಿಂದ ರಾಧೆಯ ಪ್ರಸ್ತುತ ಸ್ಥಿತಿಯನ್ನು ಹೀಗೆ ವಿವರಿಸತೊಡಗಿದಳು–



ಶ್ರೀಕೃಷ್ಣಾ, ರಾಧೆಯ ಸ್ಥಿತಿಯು ತುಂಬಾ ಚಿಂತಾಜನಕವಾಗಿದೆ. ತನ್ನ ಚಿಂತೆಯಲ್ಲಿ ಚಿಂತೆಯಿಲ್ಲದ ನಿಮ್ಮನ್ನು ಊಹಿಸಿಕೊಂಡು 'ಎಲೈ ಮೂರ್ಖನೇ, ಇಲ್ಲಿಗೇಕೆ ಬಂದೆ? ಇದುವರೆವಿಗೂ ಯಾರ ಹತ್ತಿರ ಸಲ್ಲಾಪ ನಡೆಸುತ್ತಿದ್ದೆಯೋ ಅವಳ ಹತ್ತಿರವೇ ಹೋಗು' ಎಂದು ದುಗುಡದಿಂದ ತನ್ನ ಈರ್ಷೆಯನ್ನು ಹೊರಹಾಕುತ್ತಾಳೆ. ರಾಧೆಯ ಕೋಪವನ್ನು ದೂರಮಾಡಲು ಈಗ ನೀನು ಒಂದುವೇಳೆ ಬಂದರೂ, ನೀವು ಯಾವಳೋ ಒಬ್ಬ ಗೋಪಿಯನ್ನು ಆಶ್ರಯಿಸಿದ್ದೀರಿ ಎಂದು ಭಾವಿಸಿಕೊಂಡು ನಿರ್ವೀರ್ಯಳಾಗಿ ನಗುತ್ತಾಳೆ (ಹಸತಿ). ಇದಕ್ಕೂ ಮೊದಲು ನೀವು ರಾಧೆಯೊಂದಿಗೆ ಇದ್ದಾಗ 'ನಾನೇಕೆ ಕೃಷ್ಣನನ್ನು ಆಲಿಂಗನಾದಿಗಳಿಂದ ನಿಮ್ಮನ್ನು ಮೆಚ್ಚಿಸಿ ನನ್ನೊಂದಿಗೇ ಉಳಿಯುವಂತೆ ಮಾಡಿಕೊಳ್ಳಲಿಲ್ಲ?' ಎಂಬುದಾಗಿ ವಿಷಾದದಿಂದ ಕುಗ್ಗಿ ಹೋಗುತ್ತಾಳೆ (ವಿಷೀದತಿ). 'ಇನ್ನು ನನ್ನ ಕೃಷ್ಣನು ನನ್ನ ಬಳಿ ಸಾರುವುದೇ ಇಲ್ಲವೇನೋ? ನನ್ನ ವಶನಾಗುವುದೇ ಇಲ್ಲವೇನೋ?' ಎಂದು ಭಾವಿಸಿಕೊಂಡು ತನ್ನ ದುಃಖವನ್ನು ತಡೆಯಲಾರದೆ ಬಿಕ್ಕಿ ಬಿಕ್ಕಿ ಅಳುತ್ತಾಳೆ (ರೋದತಿ)' ಕೃಷ್ಣನು ಬಂದರೂ ತನ್ನ ವಶನಾಗುವುದಿಲ್ಲವೇನೋ ಎಂಬ ಸಂಶಯದಿಂದ ಚಂಚಲ ಚಿತ್ತಳಾಗುತ್ತಾಳೆ (ಚಂಚಲತಿ). ಇದಕ್ಕಿದ್ದಂತೆಯೇ 'ಕೃಷ್ಣನು ತಾನೇ ನನ್ನನ್ನು ಹುಡುಕಿಕೊಂಡು ಬರುತ್ತಾನೆ ಬಿಡು' ಎಂಬ ಭ್ರಮೆಗೆ ಒಳಗಾಗುತ್ತಾಳೆ (ಭ್ರಮತಿ). ಆದರೂ ಬೃಂದಾವನವನ್ನೆಲ್ಲಾ ಕೃಷ್ಣನಿಗಾಗಿ ಹುಡುಕುತ್ತಾಳೆ. ಹೀಗೆ ವಿಪ್ರಲಂಭ ಶೃಂಗಾರದ ದಶದಶೆಗಳನ್ನೂ ಪರಿಪೂರ್ಣವಾಗಿ ಅನುಭವಿಸುತ್ತಾ ವಿರಹಾಗ್ನಿಯಲ್ಲಿ ತಪಿಸಿ, ತಪಿಸಿ ಅಚೇತಳಾಗಿರುವ ನನ್ನ ರಾಧಾರಾಣಿಯು ಹೀಗೆ ಬಡಬಡಿಸುತ್ತಿದ್ದಾಳೆ–

'ಶ್ರೀಕೃಷ್ಣಾ, ಈ ಮೊದಲು ನೀನು ನನ್ನೊಂದಿಗೆ ಸುಮುಖನಾಗಿದ್ದಾಗ ನಾನು ಲಕ್ಷ್ಮೀದೇವಿಯ ಸಪತ್ನಿಯಾಗಿದ್ದರೂ, ಆ ಚಂದ್ರನು ನನ್ನನ್ನೇನೂ ಮಾಡುತ್ತಿರಲಿಲ್ಲ. ಈಗ ನೀನು ನನಗೆ ಪ್ರತಿಕೂಲನಾಗಿರುವುದರಿಂದ ಆ ಲಕ್ಷ್ಮೀದೇವಿಯ ಸಹೋದರನಾಗಿರುವ ಚಂದ್ರನು ನನ್ನನ್ನು ಮನ್ಮಥನ ತಾಪಾಗ್ನಿಗೆ ಗುರಿಮಾಡಿದ್ದಾನೆ. ಎಂತಹ ಅವಕಾಶವಾದಿ ಆ ಚಂದ್ರ ತಿಳಿಯಿತೇ?'

'ಶ್ರೀಕೃಷ್ಣಾ, ನಿಮ್ಮ ಸಾಂಗತ್ಯದಿಂದ ದೂರಳಾಗಿರುವ ರಾಧಾರಾಣಿಗೆ ಎಲ್ಲಾ ಕಡೆಗಳಿಂದಲೂ ಪ್ರತಿಕೂಲಗಳೇ ಎದುರಾಗುತ್ತಿವೆ. ಆಕೆಯನ್ನು ಆದರಿಸಿ ಕಾಪಾಡು ಸ್ವಾಮಿ' ಎಂದು ಸಖಿಯು ಬೇಡಿದಳು.





**೨೩** ಗೀತ ಗೋವಿಂದ
(೧೮ ಉಬ್ಬು ಶಿಲ್ಪಗಳು)

## ನೆಲೆ

**ಆವಾಸೋ ವಿಪಿನಾಯತೇ ಪ್ರಿಯ ಸಖೀ ಮಾಲಾऽಪಿ ಜಾಲಾಯತೇ**
**ತಪೋऽಪಿ ಶ್ವಸಿತೇನ ದಾವದಹನ ಜ್ವಾಲಾ ಕಲಾಪಾಯತೇ।**
**ಸಾಪಿ ತ್ವದ್ವಿರಹೇಣ ಹಂತ! ಹರಿಣೀರೂಪಾಯತೇ ಹಾ ಕಥಂ**
**ಕನ್ದರ್ಪೋऽಪಿ ಯಮಾಯತೇ ವಿರಚಯನ್ ಶಾರ್ದೂಲ ವಿಕ್ರೀಡಿತಮ್॥**

– ಗೀತ ಗೋವಿಂದ , ಅಷ್ಟ ಪದಿ ೮:೩

ಎಲೈ ಶ್ರೀಕೃಷ್ಣಾ, ನೀವು ರಾಧೆಯ ಬಳಿ ಇಲ್ಲದೆ ಇರುವುದರಿಂದ ಮನೆಯೇ ರಾಧೆಗೆ ಕಾಡಿನಂತಾಗಿದೆ. ಸಖಿಯರ ಗುಂಪೇ ಆಕೆಗೆ ಬಲೆಯಾಗಿದೆ. ಶರೀರದ ತಾಪವೇ ದಾವಾಗ್ನಿಯಾಗಿದೆ. ಅಯ್ಯಯೋ, ಏನು ಹೇಳಲಿ? ಇವುಗಳ ಮಧ್ಯೆ ರಾಧೆಯು ಜಿಂಕೆಯ ಮರಿಯಂತೆ ಸಿಲುಕಿದ್ದಾಳೆ. ಮನ್ಮಥನು ಹೆಬ್ಬುಲಿಯಂತೆ ಘರ್ಜಿಸುತ್ತಾ ಯಮಧರ್ಮನಾಗಿ ಮೇಲೆರಗಲು ಸಿದ್ಧನಾಗಿದ್ದಾನೆ. ಇಷ್ಟವಸ್ತುವಿನ ಸಾಂಗತ್ಯವಿಲ್ಲದೆ ಸಂತಾಪ ಲಕ್ಷಣ ವ್ಯಾಧಿಯುಂಟಾಗಿದೆ. ಸಖಿಯರು ಮಾತನಾಡಿಸಿದರೂ ಮಾತಿಲ್ಲ. ಕಣ್ಣೆತ್ತಿಯೂ ನೋಡುವುದಿಲ್ಲ. ಇಂತಹ ಸ್ಥಿತಿಯಲ್ಲಿ ಆಕೆಯು ಹೇಗೆ ತಾನೇ ಬದುಕಿ ಉಳಿಯಬಲ್ಲಳು?







## ೬.

# ಸ್ಮಿತ ಸುಧಾ ಮುಗ್ಧಾನನಂ

### ಹಿನ್ನೆಲೆ



ಕೃಷ್ಣನ ವಿಯೋಗದಿಂದ ದುಃಖಿತಳಾಗಿ, ರಾಧೆಯು ಆತನಿಗಾಗಿ ಹುಡುಕಿ ಬಳಲಿ ಬೆಂಡಾದಳು. ಸಖಿಯು ಹೇಳಿದ ಕೃಷ್ಣನ ಚೇಷ್ಟೆಗಳನ್ನೆಲ್ಲಾ ಕೇಳಿ, ಬಗೆ ಬಗೆಗಳಲ್ಲಿ ರಾಧಾರಾಣಿಯು ಶ್ರೀಕೃಷ್ಣನ ಸ್ಮರಣ ಮಾಡುತ್ತಾ ಊಹಾಗಾನದಲ್ಲಿ ವಿಹರಿಸುತ್ತಾ ಉತ್ಕಂಠಿತಳಾದಳು. ಇನ್ನೂ ತಾಳಲಾರದೆ ತನ್ನಲ್ಲಿಯ ಅಂತರಂಗದ ಕೋರಿಕೆಯನ್ನು ಸಖಿಗೆ ಹೇಳಿಕೊಳ್ಳಲು ಪ್ರಾರಂಭಿಸಿದಳು : 'ಹೇಗಾದರೂ ನನ್ನನ್ನು ಕೃಷ್ಣನ ಸನಿಹಕ್ಕೆ ಸೇರಿಸು' ಹೀಗೆ ಒತ್ತಾಯಿಸುತ್ತಾ ತನ್ನ ಹಳೆಯ ಅನುಭವಗಳನ್ನು ಸ್ಮರಿಸಿಕೊಳ್ಳತೊಡಗಿದಳು.

ನಾನಾವಿಧ ಶೃಂಗಾರಾನುಭೂತಿಗಳ ವಿಕಾರಗಳ ಸಮ್ಮಿಶ್ರಣವು ಪ್ರೇಮಿಗಳ ಮಧ್ಯೆ ಪರಸ್ಪರ ಅನುರಾಗವೃದ್ಧಿಗೆ ದೋಹವಾಗುತ್ತದೆ. ಹೆಣ್ಣು ತನ್ನ ಅವಯವದ ಸೊಗಸನ್ನು ಪ್ರದರ್ಶಿಸುವುದು, ಸೀರೆಯ ಸೆರಗನ್ನು ಜಾರಿಸುವುದು, ಜಡೆಯನ್ನು ಬಿಚ್ಚುವುದು ಅಥವಾ ಹೆಣೆದು ಕೊಳ್ಳುವುದು, ಬಾರಿಬಾರಿಗೂ ಬಿಟ್ಟಿಸಿ ನೋಡುವುದು, ಇವೆಲ್ಲಾ ಕಾಮದಿಂದ ಉದ್ಭವಿಸುವ ವಿಕಾರಗಳು, ಇವು ಕಾಮರಸೋದ್ಭವಕ್ಕೆ ಆಲಂಬನೆಗಳು. ನಾಯಿಕೆಗೆ ನಾಯಕನ ಶೃಂಗಾರದ ಬಗ್ಗೆ ಇರುವ ತೀವ್ರ ಪ್ರೇಮ, ಕುತೂಹಲವನ್ನು ಅನುಸರಿಸಿರುತ್ತದೆ. ಪ್ರಿಯನ ಭೇಟಿಗೆ ಹೋಗುವವಳು ಅಭಿಸಾರಿಕೆಯಾಗುತ್ತಾಳೆ. ಅಂತಹ ಅಭಿಸಾರಿಕೆಯು ಪ್ರಿಯನನ್ನು ಭೇಟಿಯಾಗುವ ಸೂಕ್ತವಾದ ಸ್ಥಳವನ್ನು ನಿಕುಂಜಗೃಹ ಎನ್ನುತ್ತಾರೆ. ಯಾರೂ ಸಾಧಾರಣವಾಗಿ ಬರದ, ಪ್ರಕೃತಿಯು ಶೋಭಾಯವಾಗಿರುವ, ಬಳ್ಳಿ ಹೂಗಳು ತುಂಬಿರುವ ರಹಸ್ಯ ಪ್ರದೇಶಗಳು ಪ್ರೇಮಿಗಳಿಗೆ ಆಲಂಬನವಾಗಿರುತ್ತವೆ; ರತಿ ಪ್ರೀತಿಯನ್ನು ಉಂಟುಮಾಡುತ್ತವೆ. ಅವರ ಸಂಯೋಗ ರಹಸ್ಯವಾಗಿರುತ್ತದೆ.



ನಾಯಿಕೆ ಮೊದಲ ಸಮಾಗಮದಲ್ಲಿ ನಾಚಿಕೆಯ ಮುದ್ದೆಯಾಗುತ್ತಾಳೆ. ಭಯ-ಬಯಕೆ-ಪರಿಚಯವಿಲ್ಲದ ಸಾಂಗತ್ಯ-ಇವುಗಳನ್ನು ಮೀರಿರುವ ಶೃಂಗಾರ ವಿಕಾರಗಳು. ಇವೆಲ್ಲವೂ ಇಲ್ಲವಾಗುವಂತೆ ನಾಯಕನು ವಸ್ತ್ರ ಶೈಥಿಲ್ಯವನ್ನು ಮೂಡಿಸಿ ಚುಂಬನಾದಿಗಳಿಂದ ಪರವಶಗೊಳಿಸಿದ. ಕ್ರಮ ಕ್ರಮವಾಗಿ ಆನಂದ ವೀಥಿಯನ್ನು ಕ್ರಮಿಸುತ್ತಿರುವಾಗ ಕಣ್ಣುಗಳು ತಾವೇ ಅರ್ಧನಿಮೀಲಿತ ನೇತ್ರಗಳಾದವು. ಅರಿವಿಲ್ಲದೆ ನಾಯಿಕೆ ಕೋಗಿಲೆಯಂತೆ ಕೂಗಿದಳು, ನಾಯಕನೂ ಅರ್ಧನಿಮೀಲಿತ ನೇತ್ರಗಳಿಂದ ಅತಿ ಸುಂದರನಾಗಿ ಕಾಣತೊಡಗಿದನು.



ಅಂತಹ ನಾಯಕನ ಬಳಿಗೆ ನನ್ನನ್ನು ಕರೆದೊಯ್ದು ಮತ್ತೆ ಆತನ ಅನುರಾಗ ಭಾಗ್ಯ ಲಭಿಸುವಂತೆ ಮಾಡು ಎಂದು ರಾಧೆಯು ಸಖಿಯನ್ನು ಬೇಡಿದಳು. ರಾಧೆಯು ನಿಧೂವನಶೀಲೆ. ಎಂದರೆ ಅರವತ್ನಾಲ್ಕು ಶೃಂಗಾರ ಕಲೆಗಳಲ್ಲಿ ನುರಿತಿರುವ ಪ್ರೌಢನಾಯಕಿ. ಶೃಂಗಾರ ರಸದೇವತೆ. ಇದು ಪ್ರಚ್ಛನ್ನ ವಿಪ್ರಲಂಭ ಶೃಂಗಾರಕ್ಕೆ ಹಿಡಿದಿರುವ ಕನ್ನಡಿ.

ಶ್ರೀಕೃಷ್ಣನು ಗೋಪಿಕೆಯರೊಂದಿಗೆ ನಡೆಸುತ್ತಿದ್ದ ಕ್ರೀಡೆಯನ್ನು ಹಿಂದೊಮ್ಮೆ ಕಂಡಿದ್ದ ಸಖಿಯು 'ನಿನ್ನ ಕೃಷ್ಣನು ಸಾಮಾನ್ಯ ಎಂದುಕೊಳ್ಳಬೇಡ' ಎಂದು ಎಚ್ಚರಿಸುತ್ತಾ ಹೀಗೆ ಹೇಳಿದಳು.

# ನೆಲೆ

ಹಸ್ತಸ್ರಸ್ತ ವಿಲಾಸವಂಶ ಮನೃಜು ಭ್ರೂವಲ್ಲಿ ಮದ್ವಲ್ಲವೀ।
ಬೃಂದೋತ್ಸಾರಿ ದೃಗಂತವೀಕ್ಷಿತ ಮತಿ ಸ್ವೇದಾರ್ದ್ರ ಗಂಡಸ್ಥಲಮ್।
ಮಾಮುವೀಕ್ಷ್ಯ ವಿಲಜ್ಜಿತಂ ಸ್ಮಿತ ಸುಧಾಮುಗ್ಧಾನನಂ ಕಾನನೇ
ಗೋವಿಂದಂ ವ್ರಜಸುಂದರೀಗಣಾವೃತಂ ಪಶ್ಯಾಮಿ ಹೃಷ್ಯಾಮಿ ಚ॥

– ಗೀತ ಗೋವಿಂದ ಅಷ್ಟಪದಿ ೬:೯

ಎಲೈ ಸಖೀ, ಬೃಂದಾವನದಲ್ಲಿ ಶ್ರೀಕೃಷ್ಣನು ಗೋಪಿಕೆಯರೊಂದಿಗೆ ಯಥೇಷ್ಟವಾಗಿ ಕ್ರೀಡಿಸುತ್ತಿದ್ದುದನ್ನು ನಾನು ತಟ್ಟನೆ ಹೋಗಿ ನೋಡಿದೆ. ಅವರನ್ನು ಅಲ್ಲಿಂದ ದೂರ ಸರಿಯಿರಿ ಎಂದು ಕುಡಿಗಣ್ಣಿಂದ ಸೂಚಿಸಿದ. ಅದೇನು ನನ್ನ ಭಯದಿಂದಲೋ ಅಥವಾ ನಿನ್ನ ಮೇಲಿನ ಪ್ರೇಮದಿಂದಲೋ ಕೃಷ್ಣನ ಹಣೆಯು ಬೆವರಿನಿಂದ ತೇವಗೊಂಡಿತು. ಕೈಯ್ಯಿಂದ ಕೊಳಲು ಜಾರಿ ಕೆಳಗೆ ಬಿತ್ತು, ನನ್ನ ನೋಡಲಾರದೆ ಬಿಳಿಚಿ ಕೊಂಡ ತನ್ನ ಮುಖವನ್ನು ತಗ್ಗಿಸಿಕೊಂಡ. ಇಲ್ಲಿ ಕಾಯುತ್ತಿರುವ ರಾಧೆಯನ್ನೂ ಮರೆತು ಗೋಪಿಯರ ಮಧ್ಯೆ ಈ ರೀತಿ ಘನಕಾರ್ಯವನ್ನೂ ಮಾಡುತ್ತಿರುವ ಶ್ರೀಕೃಷ್ಣನನ್ನು ನೋಡಿ ನನಗಂತೂ ತುಂಬಾ ಸಂತೋಷವಾಯಿತು. ಬಿಡು!

ಇಲ್ಲಿ ಸಾತ್ವಿಕಭಾವಗಳು– ಭಯ–ಬೆವರುವಿಕೆ, ನಾಯಕನು ದಕ್ಷಿಣನಾಯಕ, ನಾಯಕಿ–ಖಂಡಿತ.









## ೨.

# ಕರತಲ ತಾಳ ಮೇಳನಂ

### ಹಿನ್ನೆಲೆ

ಕೃಷ್ಣನು ಭ್ರಮರದಂತೆ ಒಬ್ಬ ಗೋಪಿಯ ತುಟಿಗಳಿಂದ ಮಧುವನ್ನು ಹೀರಿ ಇನ್ನೊಬ್ಬಳನ್ನು ಆಕ್ರಮಿಸುತ್ತಾ ಸಾಗಿದ್ದ. ಹೀಗೆ ಅವನು ಎಲ್ಲಾ ಗೋಪಿಕಾ ಸ್ತ್ರೀಯರಿಗೂ ಆಮೋದ ಯೋಗ್ಯನಾಗಿದ್ದ.

ಮೇಘ ಶ್ಯಾಮನಾಗಿದ್ದ ಕೃಷ್ಣನು ಚಂದನವನ್ನು ಮೈಗೆ ಬಳಿದುಕೊಂಡು ಪರಿಮಳಿಸುತ್ತಿದ್ದಾನೆ. ಪೀತಾಂಬರವನ್ನು ಧರಿಸಿದ್ದಾನೆ. ಸುಂದರವಾದ ವನ ಮಾಲೆಯು ಆತನ ದಿವ್ಯ ವಿಗ್ರಹವನ್ನು ಅಲಂಕರಿಸಿದೆ. ಕಿವಿಗಳಲ್ಲಿ ಕುಂಡಲಗಳಿವೆ. ಮಣಿಮಯ ಆಭೂಷಣಗಳನ್ನು ಧರಿಸಿ ಕ್ರೀಡಾವಿನೋದದಲ್ಲಿ ತೊಡಗಿದ್ದಾನೆ. ಸಕಲ ಶೃಂಗಾರಗಳ ಗಣಿಗಳಾಗಿರುವ ಆ ತರುಣಿಯರೊಂದಿಗೆ ವಿಲಾಸವಂತನಾಗಿದ್ದಾನೆ. ಶ್ರೀಕೃಷ್ಣನ ಬಗ್ಗೆ ಈ ವಿವರಗಳನ್ನು ಕೇಳಿದ ರಾಧೆಯು ಉತ್ಕಂಠಿತಳಾದಳು. ಗೋಪಿಯರು, ಮುಗ್ಧ ತರುಣಿಯರು, ಪ್ರೌಢೆಯರು, ಈಗ ತಾನೇ ಶೃಂಗಾರ ರಸಾನುಭೂತಿಯನ್ನು ಅನುಭವಿಸುತ್ತಿರುವ ಮುಗ್ಧೆಯರು, ಶೃಂಗಾರ ಕಲೆಯಲ್ಲಿ ಹೆಚ್ಚು ಪ್ರವೇಶ ಇಲ್ಲದವರು, ಕೃಷ್ಣನ ಸೌಂದರ್ಯದಿಂದ ಆಕರ್ಷಿತರಾದವರು. ಕೃಷ್ಣನು ದಕ್ಷಿಣ ನಾಯಕ. ಮನೋಹರನು.

ಒಬ್ಬ ಗೋಪೀಭಾಮೆಯು ಮೋಹಾತಿಶಯದಿಂದ ಕೃಷ್ಣನನ್ನು ಬಿಗಿಯಾಗಿ ಅಪ್ಪಿಕೊಂಡು, ವಂಶೀನಾಥನ ವೇಣುಗಾನದೊಂದಿಗೆ ತನ್ನ ಕೂಗನ್ನು ಸೇರಿಸಿ, ಭಾವೋದ್ರೇಕದಿಂದ ರಾಗಾಲಾಪನೆಯನ್ನು ಮಾಡಿದಳು. ಜಗತ್ತನ್ನೇ ಮರೆಸುವ ಈ ಗಾನಮೃತವೇ ವಸಂತಗಾನವಾಯಿತು. ಪ್ರಕೃತಿಯೇ ಪುಳಕಗೊಂಡಿತು. ನವವಸಂತವು ಹೊಸ ರಾಗಗಳನ್ನು ಪಡೆದುಕೊಂಡಿತು. ಆ ಪ್ರೇಮಿಗಳಿಗೆ ಯುಗಗಳೇ ಕ್ಷಣಗಳಾದವು. ಆ ಮುಗ್ಧೆ ನಾಯಿಕೆಯೊಂದಿಗೆ ವಂಶೀನಾಥನು ಮುಗ್ಧಮಧುಸೂದನಾದ.

ಬೃಂದಾವನ ವೀಧಿಯಲ್ಲಿ ವಿಹರಿಸುತ್ತಾ ಮನೋಹರವಾಗಿ ಚಲಿಸುತ್ತಿರುವ ಕಣ್ಣುಗಳು ವಸಂತ ಸಂಭ್ರಮವನ್ನು ಅನುಭವಿಸುತ್ತಿರುವ ವಂಶೀನಾದದಿಂದ ಸ್ಥಂಭಿಸಿದ ಆ ಗೋಪ ಬಾಲೆಯು ಶ್ರೀಕೃಷ್ಣನ ಮುಖಮಂಡಲವನ್ನು ಕಂಡು ನಿಶ್ಚೇಷ್ಟಿತಳಾಗಿ ಅನಿಮೇಷಿತೆಯಾದಳು. ತದೇಕವಾಗಿ ಕಾಂತಾದೃಷ್ಟಿಯಿಂದ ಮಧುಸೂದನನ ವದನ ಸರೋಜವನ್ನು ಧ್ಯಾನಿಸುತ್ತಾ ಮನ್ಮಥವಿಕಾರಿ ಯಾದಳು. ಆ ಮುಗ್ಧನಾಯಿಕೆಯ ನಿಜ ಪ್ರಪಂಚವು ಸ್ಥಂಭಿಸಿತು. 'ಸ್ಥಂಭನ'ಎಂಬುದು ಒಂದು ಮನ್ಮಥಾವಸ್ಥೆ. ಇಲ್ಲಿಯ ಸ್ಥಾಯೀಭಾವ 'ವಿಸ್ಮಯ'





ಶ್ರೀಕೃಷ್ಣನ ಪ್ರೇಮದಲ್ಲಿ ಮುಳುಗಿರುವ ನಿತಂಬವತಿಯೊಬ್ಬಳು ಗೋಪವಧುಗಳೊಂದಿಗೆ ಇದ್ದ ಶ್ರೀಕೃಷ್ಣನನ್ನು ನೋಡಿ ಮೋಹವಶಗೊಂಡು ಇತರರೆಲ್ಲಾ ಏನೆಂದು ಭಾವಿಸುತ್ತಾರೋ ಎಂಬುದನ್ನೂ ಪರಿಗಣಿಸದೆ, ಕನಸುಕಾಣುತ್ತಿರುವವಳಂತೆ ವಿಲಾಸವಾಗಿ ತನ್ನ ನಿತಂಬಗಳನ್ನು ಚಲಿಸುತ್ತಾ ಕೃಷ್ಣನನ್ನು ಹಂಸನಡಿಗೆಯಲ್ಲಿ ಸಮೀಪಿಸಿ 'ಕೃಷ್ಣಾ, ನಿನಗೊಂದು ರಹಸ್ಯವನ್ನು ಹೇಳುತ್ತೇನೆ. ಕೇಳು' ಕೃಷ್ಣನ ಕೆನ್ನೆಯ ಬಳಿಗೆ ತನ್ನ ಮುಖವನ್ನು ಸೇರಿಸಿ ಮನಸಾರೆ ಒಮ್ಮೆ ಮುದ್ದಿಸಿದಳು. ಅವಳ ಗಾಢ ಮುತ್ತಿಗೆ ಕೃಷ್ಣನೂ ಪುಳಕಿತಗೊಂಡ! ಇದರಿಂದ ನಾಯಕನಲ್ಲಿ 'ಸಾತ್ವಿಕೋದಯ'ವಾಯಿತು.

ಇಲ್ಲಿ ನಾಯಕನು 'ಅನುಕೂಲ ನಾಯಕ'. ನಾಯಿಕೆಯ 'ಪ್ರೌಢ'. ಚುಂಬನವು ಪೀಡಿತವಾಗಿದ್ದು ಸಾತ್ವಿಕೋದಯಕ್ಕೆ ಕಾರಣ. ಇದು ಶೃಂಗಾರದಲ್ಲಿಯ ವ್ಯಭಿಚಾರಿ ಭಾವವಾಗಿರುತ್ತದೆ.

ಅಬ್ಬ 'ಆ ಗೋಪಿಯ ಧೈರ್ಯವೇ ! ಯಮುನಾ ತರಂಗಗಳ ಪರಿಷ್ವಂಗ ಹೊತ್ತುತಂದ ಸುಗಂಧದಿಂದ ಗತಸ್ಮೃತಿಗಳ ವೈಭವವನ್ನು ಸ್ಮರಿಸಿಕೊಂಡು, ಅನ್ಯಾಸಕ್ತನಾಗಿರುವ ಕೃಷ್ಣನನ್ನು ಬಳಿಸಾರಿ, ಅವನ ದುಕೂಲವನ್ನು ಎಳೆಯುತ್ತಾ, ನಕ್ಕು, ಜಲಕ್ರೀಡೆಗೆ ಆಹ್ವಾನಿಸಿದಳು. ಅವಳ ನಗೆಯ ಅರ್ಥವನ್ನು ಗ್ರಹಿಸಿದ ಕೃಷ್ಣನು ಅವಳತ್ತ ಸರಿದ. ಎಂತಹ ಧೀರೆ ಅವಳು! ನೋಡಿದೆಯಾ ರಾಧೆ' ಎಂದು ಸಖಿ ಹೇಳುತ್ತಿದ್ದಂತೆಯೇ ಇನ್ನೊಂದು ಪ್ರಸಂಗ. ಅವಳ ಮನದಲ್ಲಿ ಮೂಡಿತು. 'ಇದನ್ನು ಕೇಳು ರಾಧಾರಾಣಿ...'





# ನೆಲಿ

**ಕರತಲತಾಳ ತರಳ ವಲಯಾವಳಿ ಕಲಿತ ಕಲಸ್ವನವಂಶೇ।**
**ರಾಸರಸೇನಸಹ ನೃತ್ಯಪರಾಹರಿಣಾ ಯುವತಿಃ ಪ್ರಶಶಂಸೇ।**
**ಹರಿ ರಿಹ ಮುಗ್ಧವಧೂನಿಕರೇ ವಿಲಾಸಿನಿ ವಿಲಸತಿ ಕೇಳಿಪರೇ॥**

**– ಗೀತ ಗೋವಿಂದ, ಅಷ್ಟಪದಿ ೪:೬**

ಎಲ್ಲೈ ರಾಧೇ, ಒಬ್ಬ ಯುವತಿಯು ಬೃಂದಾವನದ ಈ ರಾಸಕ್ರೀಡೆಯಲ್ಲಿ ಕೃಷ್ಣನ ಹಿಂದೆ ಬಿದ್ದು ನಾಟ್ಯವನ್ನು ಮಾಡುತ್ತಾ ಹಾಡಿಗೆ ತಕ್ಕಂತೆ ತನ್ನ ಕೈ ಬಳೆಗಳನ್ನು ಘಲ್ ಘಲ್ ಎಂದು ತಾಳ ಹಾಕುವಂತೆ ಮಾಡುತ್ತಿರುವಾಗ ಆ ನಾದವು ವೇಣುನಾದದಲ್ಲಿ ಮಿಳಿತಗೊಂಡಿತು. ಆಗ ಕೃಷ್ಣನು ಅಚ್ಚರಿಗೊಂಡು ಆ ಹೆಣ್ಣನ್ನು ಬಹುವಾಗಿ ಹೊಗಳಿದನು. ಅಲ್ಪ ಉತ್ಸಾಹಿಯಾದ ಯುವತಿಯೂ, ರಾಸ–ಸಂಗೀತಗಳ ಸಿದ್ಧಿ ಇಲ್ಲದಿದ್ದರೂ, ತುಂಬಾ ಸುಲಭವಾಗಿ ಕೃಷ್ಣನ ಗಮನ ಸೆಳೆದು ಮೆಚ್ಚುಗೆ ಗಳಿಸಿದಳು ಆ ಚಿತ್ರಿಣಿ. ಅವಳನ್ನು ಕೊಂಡಾಡಿ ಅವಳೊಂದಿಗೆ ಕೃಷ್ಣನು ನರ್ತಿಸಿದನು!









# ೮.

# ಅಮೋಘ ಧನುಃ

## ಹಿನ್ನೆಲೆ

ಶ್ರೀಕೃಷ್ಣನು ಸ್ವಗತವಾಗಿ ಹೀಗೆ ಹೇಳಿಕೊಳ್ಳುತ್ತಾನೆ –

'ಬೃಂದಾವನದಲ್ಲಿ ಒಂದು ದಿನ ಗೋಪಿಕೆಯರೊಂದಿಗೆ ಕ್ರೀಡಿಸುತ್ತಿದ್ದಾಗ ರಾಧೆಯ ಕಣ್ಣಿಗೆ ಬಿದ್ದೆ ! ನನ್ನನ್ನು ಅಲ್ಲಿ ನೋಡಿದ ರಾಧೆಯು ಬಹುವಿಚಲಿತಳಾದಳು. ಅವಳ ಕೋಪ ತಾರಸ್ಥಾಯಿಯನ್ನು ತಲುಪಿತು. ತಟ್ಟನೆ ಸಿಟ್ಟು ಮಾಡಿಕೊಂಡು ಹೊರಟು ಹೋದಳು. ಆಗಲೇ ರಾಧೆಯನ್ನೂ ತಡೆದು ಅನುನಯದಿಂದ ಬೇಡಿಕೊಂಡರೆ ಅಲ್ಲಿದ್ದ ಗೋಪಿಕೆಯರ ದೃಷ್ಟಿಯಲ್ಲಿ ನಾನು ತುಂಬಾ ಹಗುರವಾಗುತ್ತೇನೇನೋ ಎಂದು ಹೆದರಿ ಕೇಳಿಕೊಳ್ಳುವ ಪ್ರಯತ್ನ ಮಾಡಲಿಲ್ಲ. ಆದರೆ ಈಗ ಆ ಅಭಿಮಾನವತಿಯನ್ನು ಯಾವ ರೀತಿ ಸಂತೈಸಬೇಕೋ ನನಗೆ ಹೊಳೆಯುತ್ತಿಲ್ಲ.

'ನನ್ನ ಅಪರಾಧಕ್ಕೆ ರಾಧೆಯು ದುಃಖಿಸುತ್ತಾ ಇರುವಳೇನೋ? ನನ್ನ ವಿಯೋಗದಿಂದ ಆ ಸುಕುಮಾರಿಯು ಎಷ್ಟು ಬಳಲಿದ್ದಾಳೆಯೋ? ನಾನೇ ಹೋಗಿ ಅವಳ ಪಾದವನ್ನು ಹಿಡಿದು ಕ್ಷಮೆ ಕೇಳಿದರೆ ಆಗ ಸಂತೃಪ್ತಳಾಗುವಳೇನೋ? ಇದರಿಂದ ಅವಳ ವಿರಹತಾಪ ಕಡಿಮೆಯಾಗುತ್ತದೆಯೋ ಅಥವಾ ಇನ್ನೂ ಕೋಪೋದ್ರಿಕ್ತಳಾಗುತ್ತಾಳೆಯೋ? ಈಗೇನು ಮಾಡಬೇಕೆಂಬುದೇ ಹೊಳೆಯುತ್ತಿಲ್ಲವಲ್ಲಾ ! ನನ್ನ ಪ್ರೇಯಸಿ ನನ್ನ ಬಳಿ ಇಲ್ಲ ಎಂದ ನಂತರ ಈ ಸಂಪತ್ತು, ಈ ವಿಶಾಲವಾದ ಮನೆ, ಬಂಧು ಜನ ಇವೆಲ್ಲಾ ಏತಕ್ಕಾಗಿ ? ನನ್ನ ಬದುಕೇ ವ್ಯರ್ಥವಲ್ಲವೇ?

'ರಾಧೆಗೆ ನನ್ನ ಬಗ್ಗೆ ವಿಪರೀತ ಕೋಪವೇ ಇರಬೇಕು. ಹುಬ್ಬುಗಳು ಕೋಪದಿಂದ ಗಟ್ಟಿಕ್ಕಿವೆ. ಅವಳ ಮುಖವನ್ನು ಆಗ ತಾನೇ ಅರಳಿರುವ ತಾವರೆ ಎಂದುಕೊಂಡು ದುಂಬಿಗಳು ಆವರಿಸಿವೆ. ದುಂಬಿಗಳ ಈ ಕಾಟಕ್ಕೆ ಮತ್ತೂ ಕೋಪಗೊಂಡು ಮುಖವೆಲ್ಲಾ ಇನ್ನೂ ಕೆಂಪೇರಿದೆ. ಈಗ ಅವಳ ಮುಖ ಕೆಂಪು ತಾವರೆಯೇ ಆಗಿದೆ. ಅಂತಹ ಅತಿಸುಂದರ ಮುಖಿ ನನ್ನ ವಿಯೋಗಕ್ಕಾಗಿ ಬಾರಿಬಾರಿಗೂ ಪರಿತಪಿಸುತ್ತಿದ್ದಾಳೆ (ರಾಧೆಯ ಅಂಗಾಂಗ ಸೌಂದರ್ಯವನ್ನು ನೆನೆಪಿಸಿಕೊಂಡು ವರ್ಣಿಸುತ್ತಿದ್ದಾನೆ ಕೃಷ್ಣ. ಇದನ್ನು <u>ಗುಣಕೀರ್ತನೆ</u> ಎನ್ನುತ್ತಾರೆ).



'ಬೃಂದಾವನವನ್ನೆಲ್ಲಾ ರಾಧೆಗಾಗಿ ಹುಡುಕಿದೆ. ಅವಳಿಗಾಗಿ ಪರಿತಪಿಸಿದೆ ! ವಿಲಪಿಸಿದೆ ! ನಾನೆಂತಹ ಹುಚ್ಚ. ಇದೆಲ್ಲಾ ವ್ಯರ್ಥವೇ ಅಲ್ಲವೇ? ಆ ರಾಧೆಯು

ನನ್ನ ಹೃದಯರಾಣಿಯಾಗಿ ಸದಾ ನನ್ನ ಹೃದಯವಾಸಿಯಲ್ಲವೇ? ವ್ಯರ್ಥವಾಗಿ ಎಲ್ಲೆಲ್ಲೋ ಹುಡುಕುತ್ತಿದ್ದೇನಲ್ಲಾ ! ನನ್ನ ಪ್ರೇಯಸಿಯನ್ನು ಹೃದಯದಲ್ಲಿಯೇ ಜತನ ಪಡಿಸಿಕೊಂಡು ಸಕಲ ಪ್ರೀತಿಯನ್ನೂ ನಾನೇ ಅನುಭವಿಸುತ್ತೇನೆ.

'ನನ್ನನ್ನು ನೀನು ಬಿಟ್ಟು ಇದ್ದದ್ದೇ ಇಲ್ಲವಲ್ಲಾ! ನಾನು ಅನ್ಯಭಾಮೆಯರೊಂದಿಗೆ ಇದದ್ದು ನಿನಗೆ ಅಸೂಯೆಯನ್ನುಂಟು ಮಾಡಿದೆಯಲ್ಲವೇ? ಇದೋ ನನ್ನ ನಮಸ್ಕಾರ. ಕೈಮುಗಿದು ಬೇಡುತ್ತೇನೆ. ನನ್ನ ಮೇಲಿನ ಕೋಪವನ್ನು ಬಿಡು, ದೇವೀ,' ನನ್ನ ಮೇಲೆ ಕರುಣೆ ಇರಿಸು' (ಎಂದು ಶೃಂಗಾರ ನಂದನಂದನನು ಪ್ರಾರ್ಥಿಸುತ್ತಿದ್ದಾನೆ). ಇದು ಉದ್ವೇಗ ಎಂಬ ವ್ಯಭಿಚಾರಿ ಅವಸ್ಥೆ. ಈ ಸ್ಥಿತಿಯನ್ನು ಪ್ರಲಾಪ ಎಂದು ಹೇಳುತ್ತಾರೆ.) ಇದೆಲ್ಲಾ ಕೃಷ್ಣನ ಭ್ರಾಂತಿ. ಕೃಷ್ಣನಿಗೆ ರಾಧೆಯೇ ಎಲ್ಲಾ ಕಡೆಯೂ ಕಾಣಿಸುತ್ತಿದ್ದಾಳೆ. ಇದೇನು ಅದ್ವೈತ! ಆದರೆ ಕೃಷ್ಣ ಮಾತ್ರ 'ದೇಹಿ ಸುಂದರೀ' ಎಂದೇ ಬೇಡುತ್ತಿದ್ದಾನೆ. ಕೃಷ್ಣನಲ್ಲಿಯ ದೈನ್ಯತೆ ಈ ಭ್ರಾಂತಿಯಲ್ಲಿ ಕಾಣುತ್ತದೆ. ಇದು ದ್ವಿಪದ ವಿಪ್ರಲಂಭ ಶೃಂಗಾರ.

ಕೃಷ್ಣನು ರಾಧೆಯ ಸ್ಮರಣೆಯಲ್ಲಿ ಮನ್ಮಥನ ಬಾಧೆಯನ್ನು ತಾಳಲಾರದೆ, ಭ್ರಾಂತನಾಗಿ ದೈನ್ಯಸ್ಥಿತಿಯನ್ನು ಅನುಭವಿಸುತ್ತಿದ್ದಾನೆ. ರಾಧೆಯು ಬಳಿಯಲ್ಲಿ ಇಲ್ಲದ್ದರಿಂದ ದೇವದೇವನಾದ ಕೃಷ್ಣನೂ ಅಶಕ್ತನಾಗಿದ್ದ. ತಾಳ್ಮೆಯ ನಶಿಸಿತ್ತು. ಮನ್ಮಥನನ್ನು ಬೇಡಲು ಪ್ರಾರಂಭಿಸಿದ.

'ನನ್ನ ಪ್ರಿಯತಮೆಯಿಂದ ದೂರನಾಗಿರುವ ನನ್ನನ್ನು ಶಿವನೆಂದು ತಪ್ಪಾಗಿ ತಿಳಿದು ಬಾಣ ಪ್ರಯೋಗ ಮಾಡುತ್ತಿರುವೆಯಾ? ನೀನೇನೋ ಸಮಸ್ತ ಜಗತ್ತನ್ನೆಲ್ಲಾ ಜಯಸಬಲ್ಲ ಪೌರುಷವಂತ. ನಾನೋ ತೀರಾ ಸಾಮಾನ್ಯ. ರಾಧೆಯ ದಾಸನು ಮಾತ್ರವೇ ! ಈಗಾಗಲೇ ಶರಪರಂಪರೆಯಿಂದ ನನ್ನ ಹೃದಯವೆಲ್ಲಾ ಗಾಯಗಳಿಂದ ತುಂಬಿದೆ. ಆದ್ದರಿಂದ ನಿನ್ನ ಬಾಣಗಳನ್ನು ಮತ್ತೆ ಪ್ರಯೋಗಿಸಿದರೆ ಈ ಮೊದಲೇ ಸತ್ತವನನ್ನು ಮತ್ತೆ ಕೊಂದಂತಾಗುತ್ತದೆ. ನಿನ್ನ ಅಮೂಲ್ಯ ಬಾಣಗಳನ್ನು ಹಾಗೇಕೆ ವ್ಯಥಾ ಮಾಡುತ್ತೀ? ನಿನ್ನ ಪ್ರತಾಪ ನನಗೇನು ಗೊತ್ತಿಲ್ಲವೇ?' ಎಂದು ಕೃಷ್ಣನು ಅನುನಯದಿಂದ ಮನ್ಮಥನನ್ನು ಬೇಡಿಕೊಂಡ.



## ನೆಲೆ

ಭ್ರೂ ಪಲ್ಲವಂ ಧನು ರಪಾಂಗತರಂಗಿತಾನಿ
ಬಾಣಾಃ ಗುಣಃ ಶ್ರವಣಪಾಲಿರಿತಿ ಸ್ಮರಣೇ।
ತಸ್ಯಾಮನಂಗ ಜಯ ಜಂಗಮ ದೇವತಾಯಾಮ್
ಅಸ್ತ್ರಾಣಿ ನಿರ್ಜಿತಜಗಂತಿ ಕಿಮರ್ಪಿತಾನಿ ॥

–ಗೀತ ಗೋವಿಂದ, ಅಷ್ಟಪದಿ ೭:೧೩

ಮನ್ಮಥನು ಹೀಗೆಲ್ಲಾ ಏತಕ್ಕಾಗಿ ತನ್ನ ಸ್ವೈರಾಚಾರವನ್ನು ನಡೆಸುತ್ತಿದ್ದಾನೆಯೋ ಎಂದು ಆಲೋಚಿಸುತ್ತಿದ್ದ ಕೃಷ್ಣನಿಗೆ ಈ ವಿಷಯವು ಆಗ ಹೊಳೆಯಿತು–

ಲೋಕಗಳನ್ನೆಲ್ಲಾ ಜಯಿಸಬೇಕೆಂಬ ಉದ್ದೇಶದಿಂದ ಮನ್ಮಥನು ಆ ವ್ರಜಸುಂದರಿ ರಾಧೆಯ ನೆರವನ್ನು ಕೋರಿರಬಹುದು. ಮೂರು ಲೋಕಗಳನ್ನು ಅತ್ಯಂತ ಸುಲಭವಾಗಿ ಗೆಲ್ಲಲು ಅತ್ಯಾವಶ್ಯಕವಾಗಿರುವ ಅಪೂರ್ವ ಬಾಣ ಸಂಪತ್ತು ಇರುವುದು ಆಕೆಯ ಬಳಿಯೇ! ರಾಧೆಯ ಕಣ್ಣು ಹುಬ್ಬುಗಳೇ ಮನ್ಮಥನಿಗೆ ಬಹು ಬಲವಾದ ಧನುಸ್ಸಾಗಿದೆ. ಆಕೆಯ ಓರೆ ನೋಟಗಳೇ ಧನುಸ್ಸಿಗೆ ಅವಶ್ಯಕವಾದ ಹಗ್ಗವಾಗಿದೆ. ರಾಧೆಯ ಅಂಗಾಂಗ ಸೌಂದರ್ಯವೇ ಮದನನ ಪಂಚಬಾಣಗಳಾಗಿವೆ. ಅದೇ ದಿವ್ಯಧನುಸ್ಸೇ ಲೋಕಗಳೆಲ್ಲವನ್ನೂ ಸಮ್ಮೋಹನಕ್ಕೊಳಪಡಿಸಬಲ್ಲದ್ದಾಗಿದೆ. ಆ ರಾಧೆಯ ಅಂಗಾಂಗ ಸೌಂದರ್ಯ ಸಮ್ಮೋಹನ ಅಸ್ತ್ರಗಳನ್ನು ಎದುರಿಸಿ ಪ್ರತ್ಯೇಕವಾಗಿ ನಿಲ್ಲಬಲ್ಲ ಶಕ್ತಿಯು ಮೂರು ಲೋಕಗಳಲ್ಲೂ ಯಾರಲ್ಲೂ ಖಂಡಿತವಾಗಿಯೂ ಇಲ್ಲ. ರಾಧೆಯ ನೋಟಗಳು ಈಗಾಗಲೇ ಕೃಷ್ಣನ ಹೃದಯವನ್ನು ಇರಿದು ತುಂಬಾ ಛಿದ್ರಗೊಳಿಸಿದೆ. ಆದ್ದರಿಂದಲೇ ತಾನು ರಾಧೆಯನ್ನು ಅರಸುತ್ತಾ ಬೃಂದಾವನದಲ್ಲಿ ಹುಚ್ಚನಾಗಿ ಅಲೆಯುತ್ತಿರುವುದು.







೬.

# ಅಬಲ ಕಬಳಾಯ

## ಹಿನ್ನೆಲೆ



ಶ್ರೀಕೃಷ್ಣನ ಸುಳ್ಳುಮಾತುಗಳು, ಮುಗ್ಧತೆಯ ನಟನೆಯು ರಾಧೆಯನ್ನು ಬಹಳವಾಗಿ ಕೆರಳಿಸಿತ್ತು ತನ್ನ ಮಾತನ್ನು ಮುಂದುವರಿಸಿದಳು–

'ಢೋಂಗೀ ಮಾತುಗಳನ್ನು ಹೇಳಬೇಡ. ಬರುತ್ತಿರುವಾಗ ಕತ್ತಲೆಯ ದಾರಿಯಲ್ಲಿ ಮುಳ್ಳಿನ ಗಿಡ ಚುಚ್ಚಿ ಪರಚಿತೇ? ಪಾಪ... ಹಾಗಿದ್ದರೆ ನಿನ್ನ ವಿಶಾಲ ವಕ್ಷದ ಮೇಲೆ ಮದರಂಗಿಯ ಮುದ್ರೆ ಹೇಗೆ ಬಂತೋ? ಬೇರೆಯವರು ಯಾರಾದರೂ ಇದನ್ನು ನೋಡಿದರೆ ನಾನು ತಲೆ ಎತ್ತಿ ಓಡಾಡುವುದೇ ಅಸಾಧ್ಯವಾಗುತ್ತದೆ.... ಏನೇ ಆಗಲಿ, ಆ ಸೊಗಸುಗಾತಿ ಎಷ್ಟೊಂದು ನೈಪುಣ್ಯ ಸಿದ್ಧಿಸಿಕೊಂಡಿದ್ದಾಳೋ ! ಅವಳು ತನ್ನ ಪಾದಕ್ಕೆ ಅಲಂಕರಿಸಿಕೊಂಡಿದ್ದ ಮದರಂಗಿಯು ನಿನ್ನ ಎದೆಯ ಮೇಲೆ ಮುದ್ರೆ ಒತ್ತಿದೆಯಲ್ಲಾ ! ಆದ್ದರಿಂದಲೇ ಇರಬೇಕು ಆ ಮುದ್ರೆ ನಿನಗೆ ಮನ್ಮಥಮುದ್ರೆಯಾಗಿ ನಿನ್ನ ಹೃದಯವನ್ನು ಚಿಗುರಿಸಿ ನೀನು ಅವಳಿಗೆ ದಾಸೋಽಹಂ ಎಂದ ಹೇಳಿದ್ದು!' ಎಂದ ರಾಧೆಯು ಸ್ವಲ್ಪ ತಡೆದು, ಕೃಷ್ಣನ ಮುಖವನ್ನು ದಿಟ್ಟಿಸಿನೋಡಿ ಅರೆ ನಿಮಿಷದ ತರುವಾಯ ತನ್ನ ಮಾತನ್ನು ಮುಂದುವರಿಸಿದಳು :

'ನನಗೆ ಚೆನ್ನಾಗಿ ಗೊತ್ತಿದೆ. ಇದಕ್ಕೂ ನೀನು ಕತೆಯನ್ನು ಹೇಳಬಲ್ಲೆ!...' ಓ ಆ ಗೆರೆಯೇ?... ನಿನಗಾಗಿ ಆ ವನದಲ್ಲಿ ಹುಡುತ್ತಿರುವಾಗ ಮುಳ್ಳು ತರಚಿಕೊಂಡಿದೆ. ಕೆಂಪು ಮಂದಾರಗಳು ಎದೆಗೆ ಒತ್ತಿವೆ. ಅದೇ ಬಣ್ಣವೇ ಇದು ಎಂದು ಹೇಳುತ್ತೀಯೇನೋ ಪಾಪ.



'ಆದ್ದರಿಂದಲೇ ಇರಬೇಕು. ಆ ಗೋಪಿಕೆಯು ತುಟಿಯನ್ನು ಕಚ್ಚಿರುವ ಗುರ್ತು ಎಷ್ಟು ಅಲಂಕಾರಿಕವಾಗಿ ನಿನ್ನ ತುಟಿಯ ಮೇಲಿದೆ ! ನಿನ್ನ ತುಟಿಗಳ ಅಂದ ಚಂದ ಇಷ್ಟು ಅಷ್ಟೆಂದು ಹೇಳಲು ಸಾಧ್ಯವೇ ?' ಅವು ಸ್ವಾಧೀನ ಭರ್ತೃಕೆಯರ ವಿಜಯಧ್ವಜಗಳಾಗಿ ಕಾಣಿಸುತ್ತಿವೆ.

ಇದೇನು ವಿಚಿತ್ರವೋ– ಇಷ್ಟೆಲ್ಲಾ ಕಾಣಿಸುತ್ತಿದರೂ, ನನ್ನಲ್ಲುಂಟಾಗ ಬೇಕಾಗಿರುವ ಖಿನ್ನತೆಗೆ ಬದಲಾಗಿ ಹೃದಯವು ಶ್ರೀಕೃಷ್ಣನ ಸಾನ್ನಿಧ್ಯವನ್ನೇ ಕೋರುತ್ತಿದೆ. ನನ್ನ ಶರೀರ ಮಾತ್ರ ನನ್ನ ಮನಸ್ಸಿಗೆ ವಿರೋಧವಾಗಿ – ಆ ಶಠನನ್ನೇ ಬಯಸುತ್ತಿದೆ. ಏನು ಮಾಯೆಯೋ ಇದು? ಇದೆಲ್ಲಾ ವಿಧಿ ವೈಪರೀತ್ಯವೇ ಅಲ್ಲವೇ?



ಇಲ್ಲಿ ನಾಯಕ ಶಠ. ನಾಯಿಕೆ ಖಂಡಿತ

ಶ್ರೀಕೃಷ್ಣನು 'ರಾಧಾ, ನನ್ನ ಬಗ್ಗೆ ಇಷ್ಟೆಲ್ಲಾ ಅನುಮಾನಗಳನ್ನು ಕಲ್ಪಿಸಬೇಡ. ಅದರಿಂದಲೇ ನೀನು ಇಷ್ಟೊಂದು ಪರಿತಪಿಸುತ್ತಿರುವೆ. ನಿಜವಾಗಲೂ ನಿನಗಾಗಿ ಯಮುನೆಯಲ್ಲಿ ಕಮಲವನ್ನು ಕೊಯ್ಯಲು ಹೋದೆ, ಆಗ ಅದರಲ್ಲಿದ್ದ ದುಂಬಿಗಳೆಲ್ಲಾ ಒಮ್ಮೆಲೆಗೇ ಮೇಲೆದ್ದು ನನ್ನ ತುಟಿಗಳನ್ನು ಕಚ್ಚಿವೆ,... ಅಷ್ಟೆ' ಎಂದು ಹೇಳಿದ.

'ಹೌದಾ !... ಅಯ್ಯೋ ಪಾಪ...!! ಸಾಕು ಸಾಕು ಈ ಪ್ರಲಾಪ. ಇನ್ನೂ ಹೇಳಬೇಕೆಂದರೆ ಮನ್ಮಥಯುದ್ಧದಲ್ಲಿ ನೀನು ಗಳಿಸಿರುವ ಮತ್ತು ಕಾಣಿಸುತ್ತಿರುವ ಕೀರ್ತಿ ಕಿರೀಟಗಳನ್ನು ಪಟ್ಟಿ ಮಾಡಬಹುದಾಗಿದೆ. ನಿನ್ನ ಮೈ ಎಷ್ಟು ಮಲಿನವಾಗಿದೆಯೋ ನಿನ್ನ ಮನಸ್ಸೂ ಅಷ್ಟೇ ಮಲಿನವಾಗಿದೆ. ಮನ್ಮಥ ಜ್ವರದಿಂದ ಗುಣಮುಖವಾಗಲು ನಿಮ್ಮನ್ನು ಆಶ್ರಯಿಸಿದ ಆಶ್ರಿತ ಜನರನ್ನೇ ನೀವು ಕಬಳಿಸುತ್ತೀರಿ... ಸಾಕು ಸಾಕು ನಿಮ್ಮ ಈ ಬೂಟಾಟಿಕೆ... ಏಯ್ ಶಠ, ತೊಲಗಿ... ತೊಲಗಿ..' ಎಂದಳು ರಾಧೆ.

'ಇಲ್ಲ ರಾಧಾ.... ನೀನೆಂದರೆ ನನಗೆ ಪಂಚಪ್ರಾಣ. ನಿನ್ನನ್ನೆಂದಿಗೂ ನಾನು ಮೋಸ ಮಾಡುವುದಿಲ್ಲ. ನಾನು ಎಂದೆಂದಿಗೂ ನಿನ್ನವನೇ...' ಎಂದ ಕೃಷ್ಣ.





## ನೆಲೆ

ಭ್ರಮತಿ ಭವಾನಬಲಾ ಕಬಳಾಯ ವನೇಷು ಕಿಮತ್ರ ವಿಚಿತ್ರಮ್।
ಪ್ರಥಯತಿ ಪೂತನಿ ಕೈವವಧೂವದ ನಿರ್ದಯ ಬಾಲ ಚರಿತ್ರಮ್॥
(ಹರಿ ಹರಿ)
ಯಾಹಿ ಮಾಧವ ಯಾಹಿ ಕೇಶವ ಮಾವದ ಕೈತವ ವಾದಮ್।
ತಾಮನುಸರ ಸರಸೀರುಹಲೋಚನ ಯಾ ತವ ಹರತಿ ವಿಷಾದಮ್॥

–ಗೀತ ಗೋವಿಂದ, ಅಷ್ಟಪದಿ ೧೨:೨

ಎಲೈ ಲಕ್ಷ್ಮೀಪತಿಯೇ, ಎಲೈ ಕೇಶವನೇ, ಹೋಗು ಹೋಗು. ಕಪಟವಾದ ಸಿಹಿ ಮಾತುಗಳಿಂದ ಮರಳು ಮಾಡಬೇಡ. ಯಾವ ಯುವತಿಯು ನಿನ್ನ ದುಃಖವನ್ನು ದೂರಮಾಡಬಲ್ಲಳೋ ಆ ಸೂಳೆಯನ್ನೇ ಅನುಸರಿಸಿಕೊಂಡು ಹೋಗು...ಅಯ್ಯಯ್ಯೋ...

ಎಲೈ ಕೃಷ್ಣನೇ, ನೀನು ಬೃಂದಾವನದಲ್ಲಿ ಹೆಂಗಸರನ್ನು ಕಬಳಿಸಲೆಂದೇ, ಓಡಾಡುತ್ತಿರುವೆ. ಅತ್ಯಂತ ನಿರ್ದಯನಾಗಿ ಹೆಂಗಸರನ್ನು ಕೊಲ್ಲುವ ವಿಶೇಷ ಗುಣದ ಚರಿತ್ರೆಯೇ ನಿನ್ನದಾಗಿರುವಾಗ ನಿನ್ನ ಈ ಕೃತ್ಯಕ್ಕೆ ಯಾವ ವಿಶೇಷ ತಾನೇ ಇದೆ? ಮಗುವಾಗಿದ್ದಾಗಲೇ ಪೂತನಿಯನ್ನೇ ಕೊಂದಿರುವ ನೀನು ಈಗ ಪ್ರೌಢನಾಗಿರುವುದರಿಂದ ಇಲ್ಲಿಯ ಹೆಂಗಸರನ್ನು ನುಂಗುವುದು ನಿನಗೆ ಯಾವ ದೊಡ್ಡ ಕೆಲಸ? ಹೋಗು... ಹೋಗು.. ಅಯ್ಯಯ್ಯೋ....







# ೧೦.

# ನಖಕ್ಷತ ರೇಖಂ

## ಹಿನ್ನೆಲೆ

ರಾಧೆಯು ತನ್ನ ಕಲ್ಪನಾ ಸಾಮರ್ಥ್ಯದಿಂದ ಕೃಷ್ಣನ ಬಗ್ಗೆ ಅನೇಕ ಊಹೆಗಳನ್ನು ಸೃಷ್ಟಿಸಿಕೊಂಡು ಹಿಂದಿನ ರಾತ್ರಿಯೆಲ್ಲಾ ಕನಸಿನ ಆ ಚಿತ್ರಗಳನ್ನು ಕಾಣುತ್ತಾ ಕಳೆದಿದ್ದಳು. ಆಗಾಗ ತಾನೇ ಇನ್ನೇನು ಕೃಷ್ಣನು ಬಂದೇ ಬಿಟ್ಟ ಎನ್ನುವಷ್ಟು ಕಾತರದಿಂದ ಹೊರಕ್ಕೆ ಓಡಿ, ನೋಡಿ ನಿರಾಶಳಾಗಿ ಬರುತ್ತಿದ್ದಳು. ಆ ನಿರಾಶೆಯ ಗರಗಸವು ರಾಧೆಯನ್ನು ಎರಡಾಗಿ ಕತ್ತರಿಸಿತ್ತು. ತನ್ನ ಪ್ರೇಮಿಯು ಬರದೆ ಇದ್ದುದರಿಂದ ವಸಂತ ಮಾಸದ ಮಾದಕ ಮಂದಾನಿಲದ ಮದಮತ್ತವಾಗಿಸುವ ಕೆಟ್ಟ ಪರಿಣಾಮಕ್ಕೆ ನಿರಂತರವಾಗಿ ರಾಧೆಯು ತುತ್ತಾಗಿದ್ದಳು.

ಇದರ ಫಲವಾಗಿ ಆ ರಾತ್ರಿ ದಶದಿಶೆಗಳಿಂದಲೂ ನೂರಾರು ಬಗೆಯ ವಸಂತ ಋತುವಿನ ಹೂಗಳ ತೀವ್ರ ಸುಗಂಧದ ಪರಿಣಾಮವಾಗಿ ರಾಧೆಯು ಉಸಿರು ಕಟ್ಟಿದವಳಂತಾಗಿದ್ದಳು. ಮನ್ಮಥನ ಪುಷ್ಪಬಾಣಗಳ ನಿರಂತರ ಧಾಳಿಗೆ ತುತ್ತಾಗಿ ಬಳಲಿದ್ದಳು. ಇದರಿಂದ ಬಳ್ಳಿ ಮಾಡದಲ್ಲಿ ವಿರಹದ ದುಗುಡವನ್ನು ಅನುಭವಿಸುತ್ತಾ, ಶ್ರೀಕೃಷ್ಣನ ಬಗ್ಗೆ ಕನಸುಕಾಣುತ್ತಾ, ಕೃಷ್ಣನೊಂದಿಗೆ ತನ್ನ ಸಂಯೋಗದ ಘಳಿಗೆಗಳನ್ನು ನೆನಪುಗಳ ಸುಳಿಯಲ್ಲಿ ಸಂಪೂರ್ಣವಾಗಿ ಸೆಳೆಯಲ್ಪಟ್ಟಿದಳು. ರಾತ್ರಿಯೆಲ್ಲಾ ಹೀಗೆಯೇ ಕಳೆದು ಸೂರ್ಯೋದಯವಾಯಿತು.

ಇದೇನು ಮನಸ್ಸಿನ ಮಂಗನಾಟವೋ, ಮನಸಿಜನ ರಂಗಿನಾಟವೋ, ಕಲ್ಪನೆಯಲ್ಲಿ ಕಾಣಿಸಿಕೊಂಡ ಪ್ರಿಯನು ಅತ್ಯಂತ ಹತ್ತಿರನಾಗಿದ್ದರೆ, ಅವನೇ ನಿಜರೂಪದಲ್ಲಿ ಮುಂದೆ ಬಂದು ನಿಂತರೆ ಅವನ ವಿರುದ್ಧ ಉಕ್ಕೇರುವ ತಿರಸ್ಕಾರ, ದ್ವೇಷ ಅಳತೆಗೂ ನಿಲುಕುವುದಿಲ್ಲವಲ್ಲಾ ! ಶ್ರೀಕೃಷ್ಣನು ಕೊನೆಗೂ ರಾಧೆಯ ಮುಂದೆ ನಿಂತ. ತನ್ನ ತಪ್ಪನ್ನು ಮನ್ನಿಸುವಂತೆ ಬಹು ಮೆದು ಸ್ವರದಲ್ಲಿ ಕ್ಷಮೆಯನ್ನು ಕೇಳಿಕೊಂಡ. ರಾಧೆಯ ಕೃದ್ಧ ದೃಷ್ಟಿಯನ್ನು, ಕ್ಷುಬ್ದ ಮನಃಸ್ಥಿತಿಯನ್ನು ಶಾಂತಗೊಳಿಸುವ ಪ್ರಯತ್ನವನ್ನು ಮಾಡಲು ಅತಿ ಪ್ರೀತಿಯಿಂದ ರಾಧೆಯ ಪದ್ಮಪಾದಗಳ ಮುಂದೆ ನತ ಮಸ್ತಕನಾದ.



ರಾಧೆಯು ವಿರಹಾಗ್ನಿಯಲ್ಲಿ ಆ ರಾತ್ರಿಯೆಲ್ಲಿ ಪರಿತಪಿಸಿದ್ದರೆ, ತನ್ನ ಮನ್ಮಥಕ್ರೀಡೆಯನ್ನು ಎಲ್ಲರಿಗೂ ಹಂಚಿ ಬೆಳಗಿನಲ್ಲಿ ಬಂದ ಲಕ್ಷ್ಮೀಪತಿಯ ಲಕ್ಷಣಗಳನ್ನು ನಖಶಿಖಪರ್ಯಂತ ಪರೀಕ್ಷಿಸಿ ಶ್ರೀಕೃಷ್ಣನ ವಿನಯ ವಾಕ್ಯಗಳ

ಗೂಢಾರ್ಥವನ್ನು ಗ್ರಹಿಸಿದಳು. ತಾನು ಅನುಮಾನಿಸಿದ ಪರಸ್ತ್ರೀ ಸಾಂಗತ್ಯಕ್ಕೆ ನಿರ್ದಿಷ್ಟವಾದ ಸ್ಪಷ್ಟ ಸಾಕ್ಷ್ಯಗಳು ತನ್ನೆದುರೇ ನಿಂತವು. ರಾಧೆಯ ಕೋಪವು ಈರ್ಷ್ಯಾ ಸಾಗರದಲ್ಲಿ ಮುಳುಗಿತು. ಸ್ವಲ್ಪ ಎಚ್ಚತ್ತು, ಹೆದರಿ ಖಂಡಿತ ನಾಯಿಕೆಯಾದಳು. ರಾಧೆ ಹೇಳಿದಳು–

ಹರಿ ಹರಿ! (ಅಯ್ಯಯ್ಯೋ)... ಹೋಗು ಹೋಗು.. ಲಕ್ಷ್ಮೀಪತಿ.... ಹೋಗು ನಿನ್ನ ಕಪಟ ಮಾತನ್ನು ಇಲ್ಲಿ ಹೇಳಬೇಡ. ಸರಸೀರುಹ ಲೋಚನಾ, ನಿದ್ರೆ ಇಲ್ಲದೆ ನಿನ್ನ ಕಣ್ಣುಗಳು ಮುಚ್ಚಿಕೊಳ್ಳುತ್ತಿವೆ. ಆ ನಿದ್ರೆಯ ಮತ್ತನ್ನು ನನ್ನ ಮೇಲೆ ಚೆಲ್ಲಬೇಡ. ರಾತ್ರಿಯೆಲ್ಲಾ ಯಾವಳೊಂದಿಗೆ ಜಾಗರಣೆಯನ್ನು ಮಾಡಿದೆಯೋ! ನಿಮ್ಮ ಕೆಂಪು ಕಣ್ಣುಗಳೇ ಅದಕ್ಕೆ ಸಾಕ್ಷಿ. ಅವಳ ಹತ್ತಿರವೇ ಹೋಗಿ. ನನ್ನಂತಹ ಪ್ರೇಯಸಿ ನಿಮಗೆ ಬೇರೆ ಇಲ್ಲ ಎಂದು ಈಗ ಹೇಳುತ್ತಿರುವೆ. ಅದೆಷ್ಟು ಸತ್ಯ ಎಂಬುದನ್ನು ನಿಮ್ಮ ಕಣ್ಣುಗಳನ್ನು ನೀವೇ ಕೇಳಿ.

ಸರಸೀರುಹ ಲೋಚನಾ ಎಂದರೆ ಹಗಲಲ್ಲಿ ಅರಳುವ ಕಮಲವಾದರೂ ಆಗಬಹುದು, ರಾತ್ರಿಗಳಲ್ಲಿ ಅರಳುವ ಕುಮುದಗಳಾದರೂ ಆಗಬಹುದು. ಕೃಷ್ಣನ ಕಣ್ಣುಗಳು ಕಮಲಗಳು ಎಂದೇ ಪ್ರಖ್ಯಾತಿ. ಆದರೆ ರಾಧೆಗೆ ಈಗ ಅವು ಕುಮುದಗಳಾಗಿ ಕಾಣಿಸುತ್ತಿವೆ. ಆದ್ದರಿಂದ ರಾತ್ರಿಯೆಲ್ಲಾ ಕುಮುದಗಳು ಅರಳಿದವು. ಅವಳ ಬಗ್ಗೆ ಕೃಷ್ಣನಲ್ಲಿ ಇನ್ನೂ ತುಂಬಿರುವ ಬಯಕೆಯೇ ಆ ಕಣ್ಣುಗಳಲ್ಲಿಯ ಕೆಂಪಾಗಿ ಸಾಕ್ಷ್ಯ ಹೇಳುತ್ತಿವೆ. ಅವಳ ಬಗ್ಗೆ ಕೃಷ್ಣನಲ್ಲಿ ಚಿಮ್ಮಿದ ಶೃಂಗಾರ ರಸದ ಬಗ್ಗೆ ಆ ಕೆಂಪು ಬಣ್ಣವು ಖಚಿತವಾಗಿ ಹೇಳುತ್ತಿದೆ. 'ನಿನ್ನ ಕಮಲ ನಯನಗಳು ಕೃಷ್ಣಾಭಿಸಾರಿಕೆಗಾಗಿ ರಾತ್ರಿ ವಿಕಸಿಸಿ ರತಿರಾಗದಿಂದ ನಿದ್ರೆ ಇಲ್ಲದೆ ನಯನ ರಾಗಗಳು ಕೆಂಪಡರಿವೆ' ಎಂದು ಕೊಂಕು ನುಡಿದಳು ರಾಧೆ.

'ಇಲ್ಲ ರಾಧೆ, ರಾತ್ರಿಯೆಲ್ಲಾ ನಿನಗಾಗಿ ಹುಡುಕಿ ಹುಡುಕಿ ಬಳಲಿದ್ದೇನೆ. ಆದ್ದರಿಂದಲೇ ನನ್ನ ಕಣ್ಣುಗಳು ಕೆಂಪಾಗಿವೆ' ಎಂದ ಶ್ರೀಕೃಷ್ಣ ಮುಗ್ಧನಂತೆ.

ರಾಧೆಯು ತನ್ನ ವ್ಯಂಗವನ್ನೆಲ್ಲಾ ಕ್ರೋಢಕರಿಸಿಕೊಂಡು 'ಹೌದ್ಹೌದು ಪಾಪ... ಅದಕ್ಕೆ ಇರಬೇಕು. ನಿನ್ನ ಕೆಂಪು ತುಟಿಗಳೂ ಕೂಡ ಆ ವಿಶಾಲಾಕ್ಷಿಯ ಕಾಡಿಕೆಯ ಕಣ್ಣನ್ನು ಚುಂಬಿಸಿ ಚುಂಬಿಸಿ ಕಪ್ಪಾಗಿವೆ. ಅವೂ ಕೂಡ ನಿನ್ನ ಪ್ರೇಮದ ಘಾಟಿಗೆ ಹಿಡಿದ ಕನ್ನಡಿಯಾಗಿವೆ. ಕೇಶವಾ ಇನ್ನೂ ಒದರಬೇಡ. ನಿನ್ನೆಲ್ಲಾ ಬಾಧೆಗಳನ್ನೂ ಆ ಮಿಟುಕಲಾಡಿಗೆ ಹೇಳಿಕೋ ಹೋಗು.. ಹೋಗು' ಎಂದಳು.

ಇಲ್ಲಿಗೆ ನಿಲ್ಲಿಸದೆ ರಾಧೆಯು ತನ್ನ ವಾಕ್ ಪ್ರಹಾರವನ್ನು ಮುಂದುವರಿಸಿದಳು–

# ನೆಲೆ

ವಪುರನುಹರತಿ ತವ ಸ್ಮರಸಂಗರ ಖರನಖ ರಕ್ಷತ ರೇಖಮ್।
ಮರಕತ ಶಕಲ ಕಲಿತ ಕಲತಧೌತಲಿಪೇರಿವ ರತಿ ಜಯಲೇಖಮ್॥
(ಹರಿ ಹರಿ)
ಯಾಹಿ ಮಾಧವ ಯಾಹಿ ಕೇಶವ ಮಾವದ ಕೈತವ ವಾದಮ್।
ತಾಮನುಸರ ಸರಸೀರುಹ ಲೋಚನ ಯಾ ತವ ಹರತಿ ವಿಷಾದಮ್॥

–ಗೀತ ಗೋವಿಂದ, ಅಷ್ಟಪದಿ ೧೭:೩

ಎಲೈ ಕೃಷ್ಣನೇ, ನಿನ್ನ ಶರೀರವು ಘೋರವಾದ ಮನ್ಮಥಯುದ್ಧದಲ್ಲಿ ಪಡೆದುಕೊಂಡಿರುವ ನಖಕ್ಷತದ ಕೆಂಪುರೇಖೆಗಳು (ಉಗುರಿನ ಕೆರೆತದ ಗೆರೆಗಳು) ಮರಕತ ಮಣಿಯ ತುಂಡಿನ ಮೇಲೆ ಕೆತ್ತಿರುವ ಬಂಗಾರದ ರೇಖೆಗಳಂತೆ ಕಾಣುತ್ತಿವೆ. ಮನ್ಮಥ ಯುದ್ಧದಲ್ಲಿ ನಿನ್ನ ಮೇಲೆ ವಿಜಯ ಸಾಧಿಸಿರುವ ಆ ಕಲಾವತಿಯು ಮೂಡಿಸಿರುವ ಜಯರೇಖೆಗಳಂತೆ ಇವು ಸ್ಪಷ್ಟವಾಗಿವೆ. ಆದ್ದರಿಂದ ಅಪ್ರಸ್ತುತ ಮಾತುಗಳನ್ನು ನನಗೆ ಹೇಳಬೇಡ. ಅವೆಲ್ಲವನ್ನು ಆ ಮಿಟುಕಲಾಡಿಯಲ್ಲಿಯೇ ಅರಿಕೆಮಾಡಿಕೋ.

ಎಲೈ ಲಕ್ಷ್ಮೀಪತಿಯೇ (ಈಗಾಗಲೇ ಲಕ್ಷ್ಮೀಯ ಗಂಡನಾಗಿರುವವನೇ), ಎಲೈ ಕೇಶವನೇ (ಕೇಶ ಸಂಸ್ಕಾರ ಪದ್ಧತಿಗೆ ಬದ್ಧರಾಗಿರುವ ಎಂದರೆ ವಿಧವೆಯಾದ ಜಾರೆಯರಲ್ಲ ಅನುರಕ್ತನಾಗಿರುವವನೇ) ಹೋಗು, ಹೋಗು. ಕಪಟಮಾತು ಇಲ್ಲಿ ವ್ಯಯಿಸಬೇಡ. ಯಾವಳು ನಿನ್ನ ದುಃಖವನ್ನು ದೂರಗೊಳಸುತ್ತಾಳೆಯೋ ಆ ಸೂಳೆಯನ್ನೇ ಅನುಸರಿಸಿ ಹೋಗು. ಅವಳೇ ನಿನ್ನ ಈ ಗಾಯಗಳಿಗೆ ತಣ್ಣನೆಯ ಲೇಪವನ್ನು ಬಳಿಯುತ್ತಾಳೆ... ಅಯ್ಯಯ್ಯೋ...







# ೧೧.

# ವಿಪರೀತ ಕಾರಿಣಿ

## ಹಿನ್ನೆಲೆ

ರಾಧೆಯ ಸಖಿ ಇಂತು ಹೇಳಿದಳು: ಎಲೈ ಸಖಿ, ಲಕ್ಷ್ಮೀಪತಿಯನ್ನು ದೂರೀಕರಿಸಬೇಡ. ಕೃಷ್ಣನ ಬಗ್ಗೆ ಇಷ್ಟೊಂದು ಕೋಪ ಸರಿಯಲ್ಲ. ಆತನ ಚೇಷ್ಟೆಗಳು ನಮಗೆ ಹೊಸದೇನೂ ಅಲ್ಲ. ನಮ್ಮನ್ನೆಲ್ಲಾ ತನ್ನೆಡೆಗೆ ಸೆಳೆಯಬಲ್ಲ ಮಧುರ ವ್ಯಕ್ತಿತ್ವ ಆತನದು. ಬೃಂದಾವನದ ಎಲ್ಲರ ಪ್ರೇಮವನ್ನೂ ಸೂರೆಗೊಂಡಿರುವವನು. ಶ್ರೀಕೃಷ್ಣನೇ ನಿನ್ನ ಬಳಿಗೆ ಬಂದು ತನ್ನ ತಪ್ಪಿಗೆ ಕ್ಷಮೆಯನ್ನು ಕೋರಿದ್ದಾನೆ. ನಿನ್ನ ಬಗ್ಗೆ ಆತನಿಗೆ ಅಮಿತವಾದ ಪ್ರೇಮವಿದೆ. ವಸಂತ ಮಾಸದ ಮಂದಾನಿಲ ಇಷ್ಟೊಂದು ಆಹ್ಲಾದಕರವಾಗಿ ಬೀಸುತ್ತಿರುವಾಗ ಹರಿಯೇ ನೇರವಾಗಿ ಬಂದು ನಿನ್ನನ್ನು ಭೇಟಿಯಾಗಿದ್ದಾನೆ ಎನ್ನುವುದಕ್ಕಿಂತಲೂ ಹಿರಿದಾದ ಸಂತೋಷ ಸಂಗತಿ ಇನ್ನಾವುದು ತಾನೇ ಇದೆ? ಆತನು ಬಂದಿದ್ದಾನೆ ಎಂಬ ವಿಷಯವೇ ಸಂತೋಷದ ಪರಮಾವಧಿ. ನಿನ್ನ ಬರುವಿಗಾಗಿ ಆ ಬಳ್ಳಿಮಾಡದಲ್ಲಿ ಶ್ರೀಕೃಷ್ಣನು ಕಾಯುತ್ತಾ ಇದ್ದಾನೆ. ಉಳಿದೆಲ್ಲವನ್ನೂ ನಿನ್ನ ನೆನಪಿನಲ್ಲಿ ಮರೆತಿದ್ದಾನೆ. ಶ್ರೀಕೃಷ್ಣನ ಸಂತೋಷವೇ ನಮ್ಮೆಲ್ಲರ ಸಂತೋಷ ಎಂಬುದನ್ನು ಮರೆತಿರುವೆಯಾ? ಎಲ್ಲವನ್ನು ಮರೆತು ಸಮಯವನ್ನು ವ್ಯರ್ಥಮಾಡದೆ ಬಳ್ಳಿಯ ಮಾಡದ ಬಳಿಗೆ ಹೋಗು.

'ಕೃಷ್ಣನ ಸ್ಪರ್ಶಕ್ಕೆ ನೀನು ಈಗ ಅರ್ಪಿಸಿಕೊಳ್ಳದೆ, ಈ ಅವಕಾಶವನ್ನು ವ್ಯರ್ಥಮಾಡಿಕೊಳ್ಳಬೇಡ. ನಿನ್ನನ್ನು ನೀನು ಸಫಲೀಕೃತಳನ್ನಾಗಿ ಮಾಡಿಕೊಳ್ಳಬೇಕಾಗಿದ್ದರೆ. ಕೋಪವನ್ನು ಬಿಟ್ಟು ಆ ಮಧುಸೂದನನ ಬಳಿಗೆ ಕೂಡಲೇ ಹೊರಡು. ಮತ್ತೆ ಅತಿ ಮನೋಹರನಾದ ಶ್ರೀಕೃಷ್ಣನ ಸ್ನೇಹವನ್ನು ಮತ್ತೆ ಕಳೆದುಕೊಳ್ಳಬೇಡ. ಹಾಗೇನಾದರೂ ಮಾಡಿದ್ದೇ ಆದರೆ ಅದೇ ನಿನಗೆ ಅಪಾರವಾದ ನಷ್ಟ. ಈ ವಿಷಯವನ್ನು ನಿನ್ನಲ್ಲಿ ಈಗಾಗಲೇ ಅನೇಕ ಬಾರಿ ಬಿನ್ನೈಸಿಕೊಂಡಿದ್ದೇನೆ.' ಸಖಿಯ ಸಲಹೆಯನ್ನು ಕೇಳಿದ ನಂತರವೂ ರಾಧೆಯು ಇನ್ನೂ ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ. ಕೃಷ್ಣನ ವರ್ತನೆಯನ್ನು ಕ್ಷಮಿಸಿ ತನ್ನ ಕೋಪವನ್ನು ಮರೆಯುವ ಇಚ್ಛೆಯೂ ರಾಧೆಯಲ್ಲಿ ಇಲ್ಲ. ಹಾಗೆಯೇ ಶ್ರೀಕೃಷ್ಣನನ್ನು ದೂರ ಸರಿಸುವ ಬುದ್ಧಿಯೂ ಇಲ್ಲ. ಅದಕ್ಕಾಗಿ ರಾಧೆಗೆ ಅಳುವಿನ ವಿನಃ ಬೇರೇನೂ ತೋಚುತ್ತಿಲ್ಲ. ಇದನ್ನು ಕಂಡ ಸಖಿಯು ರಾಧೆಯನ್ನು ಇಂತು ಸಂತೈಸುತ್ತಾಳೆ–

ರಾಧಾರಾಣೀ, ಈಗ ಅಳುವುದೇಕೆ? ನಿನ್ನ ಕೋಪ ತಾಪಗಳಿಂದ ನಿನ್ನ ರೂಪಲಾವಣ್ಯಗಳು ಕಳಾವಿಹೀನವಾಗಿವೆ. ನೀನು ಕೃಷ್ಣನನ್ನು



ನಡೆಸಿಕೊಳ್ಳುತ್ತಿರುವ ರೀತಿಯಿಂದ ನಿನ್ನ ಪ್ರಸ್ತುತ ಸ್ಥಿತಿಯನ್ನು ನೋಡುತ್ತಿರುವ ನಿನ್ನ ವಿರೋಧಿಗಳು ನಗುತ್ತಾ ಪರಿಹಾಸ ಮಾಡುತ್ತಿದ್ದಾರೆ. ಶ್ರೀಹರಿಯೇ ನಿನ್ನ ಕ್ಷಮೆಯನ್ನು ಕೇಳುತ್ತಿದರೆ, ಅದನ್ನು ಅಲಕ್ಷಿಸಿ ಆತನ ಮಾತನ್ನು ಕೇಳಿಸಿಕೊಳ್ಳದೆ ಹೀಗೆ ವರ್ತಿಸುತ್ತಿದ್ದೀಯಲ್ಲಾ ಇದು ಸರಿಯೇ? ಕೃಷ್ಣನ ಬಗ್ಗೆ ನಿನ್ನಲ್ಲಿರುವ ಪ್ರೇಮವನ್ನು ನಿನ್ನ ಕೋಪ ನುಂಗಿಬಿಟ್ಟಿರಬೇಕು. ನಿನ್ನ ಶತ್ರುಗಳು ಶ್ರೀಕೃಷ್ಣನ ದರ್ಶನಮಾತ್ರದಿಂದಲೇ ಸಕಲವೂ ಲಭಿಸುತ್ತದೆ ಎಂದು ನಂಬಿದ್ದಾರೆ. ಆದ್ದರಿಂದ ಕೂಡಲೇ ಶ್ರೀಕೃಷ್ಣನಿರುವ ಬಳ್ಳಿಮಾಡಕ್ಕೆ ಹೋಗು.

ರಾಧಾರಾಣೀ, ಆ ಸುಂದರ ದೃಶ್ಯವನ್ನು ನೋಡು ! ಒಮ್ಮೆ ನೋಡುತ್ತಲೇ ಮೈ ಪುಳಕಗೊಳ್ಳುತ್ತದೆ. ಶ್ರೀಕೃಷ್ಣನು ನಿನ್ನನ್ನು ನೆನಪಿಸಿಕೊಳ್ಳುತ್ತಾ ವಿರಹ ತಾಪವನ್ನು ತಾಳಲಾರದೆ ನೀರಿನ ಬಿಂದುಗಳಿಂದ ಕೂಡಿರುವ ತಾವರೆಯ ಎಲೆಗಳ ಹಾಸಿನ ಮೇಲೆ ಮಲಗಿ ವಿರಹಗೀತೆಯನ್ನು ಹಾಡುತ್ತಾ ಇದ್ದಾನೆ ! ಆತನನ್ನು ನೀನು ಸೇವಿಸಿ ಸಾರ್ಥಕ ಜನ್ಮಳಾಗು. ನಿಮ್ಮ ಶೃಂಗಾರ ಕ್ರೀಡೆಗೆ ಇದು ಅತ್ಯಂತ ಸೂಕ್ತ ಸಮಯ. ನೀನು ಶ್ರೀಕೃಷ್ಣನನ್ನು ಎಷ್ಟು ತೀವ್ರವಾಗಿ ಹಿಂಸಿಸುತ್ತಿರುವೆಯೋ ನೋಡು. ಇದು ನಿನಗೆ ಸೂಕ್ತವೇ? ಆತನ ಸಾಂಗತ್ಯದಿಂದ ದೂರವಾಗಿರುವುದು ನಿನಗೇ ಒಳ್ಳೆಯದಲ್ಲ.

ರಾಧಾರಾಣೀ, ಈ ವಸಂತಕಾಲದ ಸೊಗಸನ್ನು ವ್ಯರ್ಥಗೊಳಿಸಬೇಡ. ನಾನು ಹೇಳಿದಂತೆ ಶ್ರೀಕೃಷ್ಣನ ಸಾಮೀಪ್ಯವನ್ನು ಸೇರಿಕೋ. ವಸಂತರಾಗವನ್ನು ಆಲಾಪಿಸು. ಶ್ರೀಕೃಷ್ಣನಿಗೆ ನಿನ್ನ ಬಗ್ಗೆ ಇರುವ ಅನುರಾಗದಷ್ಟೇ ನಿನಗೂ ಆತನ ಬಗ್ಗೆ ಇದೆ. ಆದ್ದರಿಂದ ಕಾಲವನ್ನು ವ್ಯರ್ಥಗೊಳಿಸಬೇಡ. ಅನಾವಶ್ಯಕವಾಗಿ ಹೀಗೇಕೆ ವ್ಯಥೆ ಪಡುತ್ತಿರುವೆ?. ಆ ಕೃಷ್ಣನು ನಿನ್ನ ಬಳಿಗೇ ಬರುತ್ತಾನೆ. ಮನೋಹರವಾಗಿ ಮಾತನಾಡುತ್ತಾನೆ. ಸುಮ್ಮನೆ ದುಃಖಿಸಬೇಡ ಸಖೀ.

– ಎಂದು ಸಖಿ ಸಾಂತ್ವನ ಹೇಳಿದಳು. ಆದರೆ ರಾಧೆಯು ಏನೂ ಹೇಳಲಿಲ್ಲ. ಯಾವ ರೀತಿಯ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸಲಿಲ್ಲ. ಆಗ ಸಖಿಯು ತೀವ್ರ ಸ್ವರದಲ್ಲಿ ರಾಧಾರಾಣಿಗೆ ಹೇಳಿದಳು–





# ನೆಲೆ

ಸ್ನಿಗ್ಧೇ ಯತ್ಪರುಷಾಽಸಿ ಯತ್ಪ್ರಣಮತಿ ಸ್ತಬ್ಧಾಽಸಿ ಯದ್ರಾಗಿಣಿ।
ದ್ವೇಷಸ್ಥಾಽಸಿ ಯದುನ್ಮುಖೇ ವಿಮುಖತಾಂ ಯತಾಽಸಿ ತಸ್ಮಿನ್
ಪ್ರಿಯೇ ತದ್ಯುಕ್ತಂ ವಿಪರೀತಕಾರಿಣಿ ತವ ಶ್ರೀಖಂಡಚರ್ಚಾ ವಿಷಂ।
ಶೀತಾಂಶು ಸ್ತಪನೋಹಿಮಂ ಹುತವಹಃ ಕ್ರೀಡಾ ಮುದೋ ಯಾತನಾಃ॥

–ಗೀತ ಗೋವಿಂದ, ಅಷ್ಟಪದಿ ೧೮:೯

ಎಲ್ಲೈ ರಾಧೆ, ಸ್ವಯಂ ಕೃತಾಪರಾಧಕ್ಕಾಗಿ ಉಂಟಾಗಿರುವ ಕಷ್ಟಕ್ಕೆ ಚಿಂತಿಸಿ ಫಲವೇನು? ನಿನ್ನ ವಿಪರೀತ ಕಾರ್ಯಗಳೇ ನಿನ್ನನ್ನು ಇಲ್ಲಿಯ ತನಕ ಕರೆದು ತಂದಿದೆ. ನಿನ್ನ ಪ್ರಿಯನು ಸರಸನಾಗಿ ನಿನ್ನಲ್ಲಿಗೆ ಬಂದಾಗ ನೀನೇಕೆ ಕಠಿಣಳಾಗಿ ವರ್ತಿಸಿದೆ? ನಿನ್ನ ಪ್ರಸನ್ನತೆಯನ್ನು ಕೋರಿ ನಿನ್ನನ್ನು ಪ್ರಾರ್ಥಿಸಿದಾಗಲೂ ಪ್ರತಿಮೆಯಂತೇಕೆ ನಿಂತಿದ್ದೆ? ನಿನ್ನೊಂದಿಗೆ ಅನುರಾಗದಿಂದ ವರ್ತಿಸಿದಾಗಲೂ ನೀನೇಕೆ ಶತ್ರುವಿನಂತೆ ವರ್ತಿಸಿದೆ? ಆತನು ಬಳಸಾರಿದಾಗ ನೀನೇಕೆ ವಿಮುಖಳಾಗಿ ದೂರಸರಿದೆ? ಈ ವಿಪರೀತ ವರ್ತನೆಯೇ ನಿನಗೆ ಚಂದನ ಲೇಪವನ್ನೇ ಈಗ ವಿಷಲೇಪವನ್ನಾಗಿ ಮಾಡಿದೆ. ಚಂದ್ರನನ್ನು ಸೂರ್ಯನನ್ನಾಗಿ ಮಾಡಿದೆ. ಮಂಜು ಬೆಂಕಿಯಾಗಿದೆ. ಶೃಂಗಾರ ಕೇಳಿಯ ಬಯಕೆಗಳು ನರಕದ ನೋವಿನಂತೆ ಯಾತನೆ ಉಂಟುಮಾಡುತ್ತಿದೆ. ಇದು ಯುಕ್ತ ಫಲವೇ ಹೌದು! ಇದಕ್ಕೆ ಇರುವುದು ಒಂದೇ ಪರಿಹಾರ ಮಾರ್ಗ. ಒಂದೇ ದಿವ್ಯೌಷಧ. ಅತಿ ಮನೋಹರನಾದ ಶ್ರೀಕೃಷ್ಣನನ್ನು ಆಶ್ರಯಿಸು. ನಿನ್ನ ಮಾನವನ್ನು ಅರ್ಪಿಸಿ ನಿನ್ನ ಪ್ರಾಣವನ್ನು ಕಾಪಾಡಿಕೋ ಇದೊಂದೇ ಮಾರ್ಗವೇ ನಿನಗೆ ಇರುವುದು.







# ೧೨.
# ಚರಣ ಕಮಲಂ

## ಹಿನ್ನೆಲೆ

ಶ್ರೀಕೃಷ್ಣನು ಬಹುಕಾಲದಿಂದ ರಾಧೆಯ ಮುಖಕಮಲ ದರ್ಶನಕ್ಕಾಗಿ ಪರಿತಪಿಸುತ್ತಿದ್ದಾನೆ. ಆಕೆಯ ಮಧುರ ವಾಣಿಯನ್ನು ಕೇಳಲು ಉತ್ಕಂಠಿತನಾಗಿ ನಿರೀಕ್ಷೆಯಲ್ಲಿದ್ದಾನೆ. ರಾಧೆಯೊಂದಿಗೆ ತನ್ನ ಕ್ರೀಡಾವಿನೋದ ಮತ್ತು ಕಾಮಕೇಳಿ ಗಳನ್ನು ಕಲ್ಪಿಸಿಕೊಂಡು ರಾಧೆಯ ಬರೆವಿಗಾಗಿ ಕಾಯುತ್ತಿದ್ದಾನೆ. ಅದೇ ಭಾವ ಸಾಗರದಲ್ಲಿ ವಿಹರಿಸುತ್ತಿದ್ದಾನೆ. ಈಗ ಆ ಶುಭ ಸಮಯವು ಸಮೀಪಿಸಿದೆ.

ರಾಧೆಯನ್ನು ಕರೆತಂದ ಸಖಿಯರು ಆಕೆಯನ್ನು ಶ್ರೀಕೃಷ್ಣಧಾಮದಲ್ಲಿ ಬಿಟ್ಟು ಎಲ್ಲರೂ ಹಿಂತಿರುಗಿದರು. ಅತಿಶಯವಾದ ನಾಚಿಕೆ ಮತ್ತು ಪರವಶಗೊಂಡಿರುವ ಸ್ಮಿತ ವದನದಿಂದ ಮನ್ಮಥರಾಗ ತರಂಗಗಳು ಹೊರ ಚಿಮ್ಮುತ್ತಿರುವಾಗ ತನ್ನ ನಾಚಿಕೆಯನ್ನು ಬಚ್ಚಿಡುತ್ತಿರುವ ರಾಧೆಯ ಸೌಂದರ್ಯವನ್ನು ಕೃಷ್ಣನು ದರ್ಶಿಸಿದನು. ಮಾತುಮಾತಿಗೂ ಎಲೆ-ಹೂಗಳ ಹಾಸನ್ನು ನೋಡುತ್ತಿರುವ ರಾಧೆಯ ದೃಷ್ಟಿಯನ್ನು ಗಮನಿಸಿದ ಆ ಶೃಂಗಾರ ಪುರುಷ. ಅದೇ ಸೂಕ್ತಸಮಯವೆಂದು ಭಾವಿಸಿ ಪ್ರೇಮಾನುರಾಗಗಳೊಂದಿಗೆ ಕೃಷ್ಣನು ಇಂತು ಹೇಳಿದ–

'ಹೇ ಕಾಮಿನಿ ನಿನ್ನ ಪಾದಗಳು ಈಗ ತಾನೇ ಬಿರಿದಿರುವ ತಾವರೆಯ ಹೂವಿನ ದಳಗಳ ಸೌಂದರ್ಯವನ್ನು ಸೌಕುಮಾರ್ಯವನ್ನು ಪಡೆದಿವೆ. ನಿನ್ನ ಹಂಸ ನಡಿಗೆಯಿಂದ ನಿನ್ನ ಪಾದಗಳು ಎಷ್ಟು ಕಂದಿವೆಯೋ !. ಆ ಪಾದಗಳನ್ನು ಈ ಚಿಗುರು ಹಾಸಿನ ಮೇಲೆ ಇಟ್ಟು ಪಾವನಗೊಳಿಸು ದೇವೀ (ಈ ಮೊದಲು ಈ ಚಿಗುರಲೆಗಳೇ ನಿನ್ನನ್ನು ಮನ್ಮಥಬಾಣಗಳಿಗೆ ತುತ್ತಾಗಿಸಿದ್ದು ಅಲ್ಲವೇ? ಈಗ ಅವುಗಳ ಮೇಲೆ ದ್ವೇಷವನ್ನು ತೀರಿಸಿಕೊಳ್ಳಲು ಸದವಕಾಶ ದೊರಕಿದೆ ಎಂಬ ಆಶಯವಿದೆ). ಕ್ಷಣಕಾಲ ನನ್ನನ್ನು ಅನುಸರಿಸಿ ಕೃತಾರ್ಥನನ್ನಾಗಿ ಮಾಡು.

ತನ್ನ ಪ್ರೇಮಾತಿಶಯದಿಂದ, ರತಿ ವಿಲಾಸಗಳಿಂದ, ಗುಣಸಂಪತ್ತಿನಿಂದ ನಾಯಕನನ್ನು ವಶವರ್ತಿಯನ್ನಾಗಿ ಮಾಡಿಕೊಂಡಿರುವ ನಾಯಿಕೆ. ಸದಾಕಾಲದಲ್ಲೂ ಅನುರಾಗಶೀಲನಾಗಿ ವರ್ತಿಸುವ ನಾಯಕನನ್ನು 'ಸ್ವಾಧೀನ ಪತಿಕಾ' ಎನ್ನುತ್ತಾರೆ. ಪತಿ ಅಥವಾ ಪ್ರೇಮಿ ಆಕೆಯ ಸ್ವಾಧೀನದಲ್ಲಿರುವುದರಿಂದ ನಾಯಿಕೆಯು ಸ್ವಾಧೀನಪತಿಕ ಎಂದು ಕರೆಯಲ್ಪಡುತ್ತಾಳೆ. ಎಲ್ಲಾ ನಾಯಿಕೆಯರೂ ಇಂತಹ ಪತಿಯನ್ನೇ ಬಯಸುವುದು. ಶ್ರೀಕೃಷ್ಣನು ತನ್ನ ಮಾತನ್ನು, ವರ್ತನೆಯನ್ನು ಮುಂದುವರಿಸುತ್ತಾ ಇಂತು ಹೇಳಿದ–





# ನೆಲೆ

**ಕರಕಮಲೇನ ಕರೋಮಿ ಚರಣ ಮಹಮಾಗಮಿತಾಽಸಿ ವಿದೂರಂ।**
**ಕ್ಷಣ ಮುಪಕುರು ಶಯನೋಃ ಪರಿಮಾಮಿವ ನೂಪುರ ಮನುಗತಿ ಶೂರಂ॥**
**ಕ್ಷಣ ಮಧುನಾ ನಾರಾಯಣಂ॥**
**ಅನುಗತ ಮನುಸರ ರಾಧೇ॥**

**–ಗೀತ ಗೋವಿಂದ, ಅಷ್ಟಪದಿ. ೨೩:೨**

ನನಗಾಗಿ ಬಹುದೂರದಿಂದ ನಡೆದು ಬಂದಿರುವುದರಿಂದ ಬಳಲಿರುವ ನಿನ್ನ ಪಾದಗಳನ್ನು ಹಿಸುಕಿ (ಪೂಜಿಸಿ) ಆಯಾಸವನ್ನು ಪರಿಹರಿಸುತ್ತೇನೆ. ನನ್ನಂತೆ ಅನುಸರಿಸಿ ಬರುವವನಿಗೆ ಸದಾ ಉಪಕಾರ ಮಾಡುವುದು ಧರ್ಮ. ಆದ್ದರಿಂದ ನಿನ್ನನ್ನು ಅನುಸರಿಸುತ್ತಿರುವ ನನ್ನನ್ನು ಆಲಿಂಗನಾದಿಗಳಿಂದ ಉಪಚರಿಸುವಂತೆಯೇ, ನಿನ್ನನ್ನು ಅನುಸರಿಸಿ ಬರುತ್ತಿರುವ ನಿನ್ನ ಕಾಲಿನ ಅಂದಿಗೆಯನ್ನು ಚಿಗುರೆಲೆಗಳ ಹಾಸಿನ ಮೇಲೆ ಕ್ಷಣಕಾಲ ಇರಿಸು. ಅದರ ಆಯಾಸವೂ ಪರಿಹಾರಗೊಂಡು ಭವಿಷ್ಯದ ನೃತ್ಯಕ್ಕೆ ಸನ್ನದ್ಧವಾಗಲಿ.





# ೧೩.
# ಸ್ಮರಗರಳ ಖಂಡನಂ

## ಹಿನ್ನೆಲೆ

ರಾಧೆಯು ತನ್ನ ಸಖಿಯರ ಮಾತುಗಳಿಂದ ಸ್ವಲ್ಪ ಶಾಂತಿ ಹೊಂದಿದಳು. ಕೃಷ್ಣನೊಂದಿಗೆ ತಾನು ಕಳೆದ ಮಧುರ ಕ್ಷಣಗಳನ್ನು ನೆನಪು ಮಾಡಿಕೊಂಡು ಮನ್ಮಥ ಬಾಧೆಗೆ ಒಳಗಾದಳು. ಆಗ ಶ್ರೀಕೃಷ್ಣನು ತನ್ನ ಹೃದಯರಾಣಿಯನ್ನು ಸಮೀಪಿಸಿ ಹೀಗೆ ಪ್ರಾರ್ಥಿಸಿದ–

'ಎಲೈ ಚಾರುಶೀಲೆ (ಒಳ್ಳೆಯ ಸ್ವಭಾವ ಉಳ್ಳವಳೇ), ಪ್ರಿಯೇ ನಿನ್ನ ಕೋಪವನ್ನು ಬಿಡು. ನನ್ನತ್ತ ಸ್ವಲ್ಪ ನೋಡು. ನಿನ್ನ ನೆನಪಿನಿಂದ ಮದನಾಗ್ನಿಗೆ ಗುರಿಯಾಗಿ ನನ್ನ ಮನಸ್ಸೆಲ್ಲಾ ಸುಟ್ಟುಹೋಗಿದೆ. ಇನ್ನೂ ಆ ಅಗ್ನಿಶಿಖೆಗಳನ್ನು ನಾನು ತಾಳಲಾರೆ. ನಿನ್ನ ಮುಖಕಮಲದಲ್ಲಿರುವ ಅಧರಾಮೃತದಿಂದ ನನ್ನ ವಿರಹಾಗ್ನಿಯನ್ನು ನಂದಿಸು. ಈ ಔದಾಸೀನ್ಯವೇಕೆ? ನಿನ್ನ ಮೃದು ಮಧುರ ಮಾತನ್ನು ನನಗೆ ಕೇಳಿಸು. ನೀನು ಮಾತನಾಡುವಾಗ ನಿನ್ನ ಹಲ್ಲುಗಳು ಚಿಮ್ಮುವ ತಿಂಗಳ ಬೆಳಕಿನ ಕಾಂತಿಯು ನನ್ನ ಹೃದಯದಲ್ಲಿ ಕೂಡಿರುವ ಕತ್ತಲೆಯನ್ನೆಲ್ಲಾ ಹೊಡೆದೋಡಿಸುತ್ತದೆ. ನಿನ್ನ ಮುಖ ಕಮಲವು ಸುರಿಸುವ ಅಧರಾಮೃತ ಪಾನಕ್ಕಾಗಿ ನನ್ನ ನೇತ್ರಚಕೋರಗಳು ಅತ್ಯಂತ ಉತ್ಕಂಠಿತವಾಗಿ ಕಾದಿವೆ. ಪ್ರಿಯೇ ನೀನು ಕನಿಕರಿಸು. ನೀನಿಲ್ಲದೆ ನಾನಿಲ್ಲ.

'ನಿಜವಾಗಿಯೂ ನನ್ನ ಬಗ್ಗೆ ನಿನ್ನ ಕೋಪ ಇನ್ನೂ ತಣ್ಣಗಾಗದೆ ಇದ್ದರೆ ನಿನ್ನ ಕೈ-ಉಗುರುಗಳನ್ನು ಬಳಸಿ ನನ್ನ ಮೇಲಿನ ಕೋಪವನ್ನು ತೀರಿಸಿಕೋ, ಅದು ಸಾಲದೆ ಹೋದರೆ ತಾವರೆಯ ದಂಟುಗಳಂತೆ ಅತಿಕೋಮಲವಾಗಿರುವ ನಿನ್ನ ಬಾಹುಗಳಿಂದ ನನ್ನನ್ನು ಕಟ್ಟಿಹಾಕು (ಆಲಿಂಗನದಿಂದ ನನ್ನನ್ನು ಹಿಂಡಿಬಿಡು). ಅದೂ ತೃಪ್ತಿಕೊಡದಿದ್ದರೆ ನಿನಗೆ ತೃಪ್ತಿಯಾಗುವ ತನಕ ಹಲ್ಲುಗಳಿಂದ ಕಚ್ಚಿಬಿಡು. ನನ್ನ ಅಪರಾಧಕ್ಕೆ ಇದೇ ಶಿಕ್ಷೆ. ನನಗೆ ಸ್ಫುರಿಸುತ್ತಿರುವ ಶಿಕ್ಷೆಗಳು ಇವೇ. ನನಗೆ ಯಾವ ಶಿಕ್ಷೆಯನ್ನು ವಿಧಿಸಿದರೆ ನಿನ್ನ ಕೋಪವು ಇಳಿಯುವುದೋ ಆ ಶಿಕ್ಷೆಯನ್ನೇ ವಿಧಿಸು. ನಾನು ಅನುಭವಿಸಲು ಸಿದ್ಧನಾಗಿದ್ದೇನೆ. ಆದರೆ ನಿನ್ನ ಕೋಪವನ್ನು ಮಾತ್ರ ನಾನು ಸಹಿಸಲಾರೆ. ನಿನ್ನ ಮೌನವು ನನ್ನನ್ನು ಸುಡುತ್ತಿದೆ. ನಿನ್ನ ಸಿಹಿಯಾದ ಮಾತುಗಳನ್ನು ಕೇಳಲು ನಾನು ಪರಿತಪಿಸುತ್ತಿದ್ದೇನೆ ಪ್ರಿಯೆ!.....

'ಪ್ರೇಯಸೀ, ನೀನು ಯಾರೆಂದು ಕೊಂಡಿದ್ದೀಯೇ ! ಅಮೂಲ್ಯ ವಜ್ರಾಭರಣದಂತಹವಳು. ನೀನೇ ನನ್ನ ಜೀವನ. ನೀನೇ ನನ್ನ ಪೂರ್ಣಚಂದ್ರ. ನಿನ್ನನ್ನು ನೋಡುತ್ತಲೇ ಸಂತೋಷದಿಂದ ಎಲ್ಲವನ್ನೂ ಮರೆತು ನಿನಗಾಗಿ



ಹುಚ್ಚನಾಗುತ್ತೇನೆ. ನಿನ್ನ ಅಂದವು ನನ್ನಲ್ಲಿ ಹೊಸ ಶಕ್ತಿಯು ತುಂಬುತ್ತದೆ. ನಿನ್ನ ಸಾನ್ನಿಧ್ಯದಲ್ಲಿ ಎಲ್ಲವನ್ನೂ ಮರೆತಿರುತ್ತೇನೆ. ಈ ಮಾತುಗಳಿಗೆ ನನ್ನ ಪ್ರಮಾಣವನ್ನು ಸ್ವೀಕರಿಸು. ನನ್ನ ಮೇಲೆ ಕರುಣೆ ಇರಿಸು ದೇವೀ, ನಿನಗಾಗಿ ನನ್ನ ಮನಸ್ಸು ಪರಿತಪಿಸುತ್ತಿದೆ. ನಿನ್ನ ಕರುಣಾದೃಷ್ಟಿಯನ್ನು ನನ್ನ ಮೇಲೆ ಹರಿಸು ದೇವೀ.'

ಶ್ರೀಕೃಷ್ಣನು ಹೀಗೆ ಬೇಡಿಕೊಂಡರೂ ರಾಧೆಯಲ್ಲಿ ಚಲನ ಕಾಣಿಸಲಿಲ್ಲ, ಆದರೆ ಎಂತಹ ಕಠಿಣ ಹೃದಯಿಯಾಗಿದ್ದರೂ ನಾಯಕನ ಪ್ರೇಮಕ್ಕೆ, ರಸಿಕತೆಗೆ ವಶಳಾಗದೆ ಇರಲು ಸಾಧ್ಯವಿಲ್ಲ ಎಂಬುದನ್ನು ಶ್ರೀಕೃಷ್ಣ ಗ್ರಹಿಸಿದ್ದ. ಆದ್ದರಿಂದ ಇನ್ನೊಂದು ಪುಷ್ಪಬಾಣವನ್ನು ಪ್ರಯೋಗಿಸಿದ.

'ಚಾರುಶೀಲೆ, ನೈದಿಲೆಯನ್ನು ತಿರಸ್ಕರಿಸುವ ನಿನ್ನ ನೇತ್ರದ್ವಯಗಳ ಸೌಂದರ್ಯವು ಈಗ ಕೋಪದ ಫಲವಾಗಿ ಕೆಂಪು ಪದ್ಮಗಳ ಸೌಂದರ್ಯವನ್ನು ಪಡೆದುಕೊಂಡಿವೆ. ಆದ್ದರಿಂದ ನಿನ್ನ ಕಣ್ಣುಗಳು ಮೂರುಲೋಕಗಳನ್ನೂ ಜಯಿಸಬಲ್ಲ ಮನ್ಮಥನ ಬಾಣಗಳಾಗಿವೆ. ಅವು ನನ್ನ ಹೃದಯವನ್ನು ಹೊಕ್ಕು ರಾಗರಂಜಿತಗೊಳಿಸಿದೆ. ಆ ಕೆಂಪು ಕಮಲಗಳ ಬಣ್ಣದಿಂದ ಎಷ್ಟು ಕೋಪವನ್ನು ಪ್ರಸರಿಸಿರುವೆಯೋ ಅದೇ ರೀತಿಯಾಗಿ ಈ ನಿನ್ನ ದಾಸನನ್ನು ಅನುಗ್ರಹಿಸು ದೇವೀ. ವಿಯೋಗಿಯಾಗಿರುವ ನನ್ನನ್ನು ನಿನ್ನ ಕಟಾಕ್ಷ ವೀಕ್ಷಣೆಯಿಂದ ಮತ್ತೊಮ್ಮೆ ಸಂಸಾರಿಯನ್ನಾಗಿ ಬದಲಿಸು ಪ್ರಿಯೇ !

ಮೃದುಭಾಷಿಣೀ, ತಾವರೆಯನ್ನು ತಿರಸ್ಕರಿಸುವಂತಹ, ಮನಸ್ಸು ರಂಜಿಸುವ, ಶೃಂಗಾರ ರಸದಿಂದ ಪ್ರಕಾಶವಂತಗೊಳ್ಳುವ ನಿನ್ನ ಪಾದಕಮಲಗಳನ್ನು ಕೆಂಪಾಗಿ ರಾಗರಂಜಿತಗೊಳ್ಳುವಂತೆ ಗೋರಂಟಿಯಿಂದ ಬಣ್ಣವನ್ನು ಬಳಿಯುತ್ತೇನೆ. ಪ್ರೇಯಸೀ. ನಿನ್ನ ಕೋಪವನ್ನು ಬಿಟ್ಟು ನನ್ನೊಂದಿಗೆ ನಿನ್ನ ಗಿಣಿ ಮಾತನ್ನಾದರೂ ಹೇಳು...' ಎಂದು ಹೇಳುತ್ತಾ ರಾಧೆಯಲ್ಲಿ ಪ್ರೇಮೋದ್ಭವವನ್ನು ಮಾಡಲು ಶ್ರೀಕೃಷ್ಣ ಪ್ರಯತ್ನಿಸುತ್ತಿದ್ದ.

ಎಷ್ಟು ಪ್ರಾರ್ಥಿಸಿದರೂ ರಾಧೆಯು ತನ್ನ ಅಭಿಮಾನವನ್ನು ಸಡಲಿಸಲಿಲ್ಲ. ತನ್ನ ಅಂತಿಮ ಪ್ರಯತ್ನವಾಗಿ ಶ್ರೀಕೃಷ್ಣ ಇಂತು ಹೇಳಿದ–







# ನೆಲೆ

ಸ್ಮರಗರಳ ಖಂಡನಂ ಮಮ ಶಿರಸಿ ಮಂಡನಂ।
ದೇಹಿ ಪದಪಲ್ಲವ ಮುದಾರಮ್।
ಜ್ವಲತಿ ಮಯಿ ದಾರುಣೋ ಮದನ ಕದನಾನಲೋ।
ಹರತು ತದುಪಾಹಿತ ವಿಕಾರಮ್॥

–ಗೀತ ಗೋವಿಂದ, ಅಷ್ಟಪದಿ ೧೯:೨

ಮನ್ಮಥನ ವಿಷದ ಫಲವನ್ನು ಪರಿಹರಿಸುವಂತಹುದು, ಅತ್ಯಂತ ಸುಂದರವಾಗಿರುವುದು ಆದ ಚಿಗುರೆಯಂತಹ ನಿನ್ನ ಪಾದವನ್ನು ನನ್ನ ಶಿರಸ್ಸಿನ ಮೇಲೆ ಇರಿಸಿ ಅಲಂಕಾರವನ್ನು ಉಂಟು ಮಾಡು. ನನ್ನಲ್ಲಿ ಮನ್ಮಥನು ಉಂಟು ಮಾಡಿರುವ ಮಹಾ ಘೋರ ವಿಷಾಗ್ನಿಯ ವಿಕಾರಗಳನ್ನೆಲ್ಲಾ ನಿನ್ನ ಚರಣ ಪಲ್ಲವವು ಕಳೆಯುತ್ತದೆ. ಸರ್ಪಾದಿಗಳ ವಿಷವು ಗರುಡನಿಂದ ಉಪಶಮನಗೊಳ್ಳುವಂತೆ ಮನ್ಮಥನ ತಾಪವು ನಿನ್ನ ಚರಣ ಪಲ್ಲವದಿಂದ ಉಪಶಮನಗೊಳ್ಳುತ್ತದೆ.







# ೧೮.
# ಕುಸುಮ ರಚನಂ

## ಹಿನ್ನೆಲೆ

ಆ ದಿವ್ಯಪ್ರೇಮಿಗಳು ಆನಂದೋತ್ಸಾಹದಿಂದ ಕೂಡಿದ ಅಲೌಕಿಕ ಅನುಭೂತಿಯಿಂದ ಗಾಢಾಲಿಂಗನಾದಿಗಳಿಂದ ಅವರು ರತ್ಯಂತದಲ್ಲಿ ಉಪಶಮಿಸಿದರು. ಅವರ ಪ್ರತಿ ಅಂಗವೂ ವಶ ತಪ್ಪಿದ್ದವು. ಮೊದಲಿದ್ದ ನಿಶ್ವಾಸ, ನಿಸ್ಪೃಹೆಗಳು ಈಗ ಗಾಳಿಯಲ್ಲಿ ಕರಗಿಹೋಗಿತ್ತು. ಬೆದರಿದ ಜಿಂಕೆಯ ಕಣ್ಣುಗಳು ಮುಚ್ಚಿ ಬಳಲಿ, ಸೋತು ಅರೆ ದೃಷ್ಟಿಯನ್ನು ಆಪಾದಿಸಿಕೊಂಡಿದ್ದವು. ಹೊಸದಾಗಿ ಆಗತಾನೇ ಬಿರಿದ ಪದ್ಮದಂತೆ ಕಾಣುತ್ತಿದ್ದ ರಾಧಾರಾಣಿಯ ಮುಖವನ್ನು ಮುದ್ದಿಸಿದರಿಂದಲೇ ಶ್ರೀಕೃಷ್ಣನು ಪುಣ್ಯ ಪುರುಷನಾದನೇನೋ? ! ಉದಯ ಕಿರಣಗಳ ಸ್ಪರ್ಶದಿಂದ ಅವರಿಬ್ಬರಿಗೂ ಸುಪ್ರಭಾತವಾಯಿತು. ಆಗ ರಾಧರಾಣೀ ಈ ಜಗತ್ತಿಗೆ ಬಂದಳು. ಗುಟ್ಟುರಟ್ಟಾಗುವುದೆಂಬ ಭಯದಿಂದ, ಮನಸ್ಸು ಅಂಗೀಕರಿಸದಿದ್ದರೂ ಬೇಗ ಮನೆಗೆ ಹೋಗಬೇಕೆಂಬ ಕಾತುರದಿಂದ, ವಿನಯವಾಗಿ ಮುಗ್ಧೆಯಂತೆ ಕೃಷ್ಣನನ್ನು ಈ ರೀತಿಯಾಗಿ ಬೇಡಿಕೊಂಡಳು–

ಯದುಕುಲನಂದನಾ, ನಿನ್ನ ಕೈಗಳು ತುಂಬಾ ತಂಪಾಗಿವೆ. ಈ ತಂಪಿನಿಂದಲೇ ನನ್ನ ಹೃದಯಾಗ್ನಿಯನ್ನು ತಣ್ಣಗಾಗಿಸಿರುವೆ. ನಿನ್ನ ಕೈಗಳಿಂದ ನನ್ನ ಸ್ತನ ಮಂಡಲವನ್ನು ಮಕರಾದಿಪತ್ರಗಳಿಂದ ಅಲಂಕರಿಸು.

ಆ ಮೃದು ಭಾಷಿಣಿಯ ರಾಧಾರಾಣಿಯ ಆಜ್ಞೆಯನ್ನು ಪಾಲಿಸಿ ಅಲಂಕಾರವನ್ನು ಆ ಸ್ನಿಗ್ಧ ಮಧುಸೂದನನು ಪ್ರಸಾದಿಸಿದ. ನಂತರ ರಾಧೆಯ ತನ್ನ ಮುಂದಿನ ಕೋರಿಕೆಯನ್ನು ಹೇಳಿದಳು:

ಪ್ರಾಣನಾಥಾ, ಗೋವಿಂದಾ ನಿನಗೆ ನೆನಪಿದೆಯೇ? ನನ್ನ ಅರ್ಧನಿಮೀಲಿತ ಕಣ್ಣುಗಳಿಂದ ನಿನ್ನ ಮೇಲೆ ಮನ್ಮಥ ಬಾಣಗಳನ್ನು ಸುರಿಸಿದ್ದು! ಇದರಿಂದ ಆಕರ್ಷಿತನಾದ ನೀನು ಬಾರಿಬಾರಿಗೂ ನನ್ನ ನೇತ್ರಗಳನ್ನು ಚುಂಬಿಸಿದೆ. ನಿನ್ನ ತುಟಿಗಳ ತೇವದಿಂದ ನನ್ನ ಕಣ್ಣಿನ ಕಾಡಿಗೆಯು ಈಗ ನಿನ್ನ ತುಟಿಗಳನ್ನು ಆಕ್ರಮಿಸಿದೆ. ಆದ್ದರಿಂದ ಈಗ ಮತ್ತೆ ನನ್ನ ಕಣ್ಣುಗಳನ್ನು ಕಾಡಿಗೆಯಿಂದ ಅಲಂಕರಿಸು.



ಮುಗ್ಧ ಮಧುಸೂದನನು ರಾಧೆಯ ಕಣ್ಣುಗಳನ್ನು ಕಾಡಿಗೆಯಿಂದ ಅಲಂಕರಿಸಿದ. ರಾಧಾರಾಣಿ ತನ್ನ ಇನ್ನೊಂದು ಕೋರಿಕೆಯನ್ನು ಮಂಡಿಸಿದಳು–



ಈ ಕಣ್ಣುಗಳೆಂಬ ಜಿಂಕೆಯ ಮರಿಗಳು ಇತ್ತ-ಅತ್ತ ಕದಲದೆ ಇರುವಂತೆ ಇರಲು ಹಗ್ಗಗಳು ಎನ್ನುವಂತೆ ನನ್ನ ಕಿವಿಗಳನ್ನು ಕರ್ಣಾಭರಣಗಳಿಂದ ಅಲಂಕರಿಸು. ಆಗ ನನ್ನ ಚಂಚಲ ನೇತ್ರಗಳು ಶಾಂತಗೊಳ್ಳುತ್ತವೆ.

ರಾಧಾಪತಿಯು ಈ ಆಜ್ಞೆಯನ್ನು ಸಂತೋಷದಿಂದ ಶಿರಸಾವಹಿಸಿದ. ಈಗ ರಾಧೆಯು ಮತ್ತೂ ಅಂದವಾಗಿದ್ದಳು. ಹೊಸ ಶೋಭೆಯಿಂದ ಕಾಂತಿಮಯಳಾಗಿದ್ದಳು. ರಾಧೆ ಮತ್ತೊಂದು ಕೆಲಸ ಹೇಳಿದಳು-

ಮಂಗಳಾಕಾರ, ನಿರ್ಮಲವಾದ ಮುಖಕಮಲ ಉಳ್ಳವನೇ, ದುಂಬಿಗಳ ಗುಂಪಿನಂತೆ ಚಂಚಲವಾಗಿರುವ ನನ್ನ ಮುಂಗುರುಳುಗಳನ್ನು ಬಾಚಿ ಜಡೆಯನ್ನು ಹಾಕು.

ಶ್ರೀಕೃಷ್ಣನು ರಾಧೆಯ ತಲೆಗೂದಲನ್ನು ಬಾಚಿ ಸುಂದರವಾದ ಜಡೆ ಹೆಣೆದನು. ರಾಧೆಯು ತನ್ನ ಮುಂದಿನ ಬಯಕೆಯನ್ನು ಹೇಳಿದಳು-

ನನ್ನ ಮುಖದಲ್ಲಿ ಬೆವರ ಹನಿಗಳು ನಿಂತು ಹಣೆಯಲ್ಲಿದ್ದ ತಿಲಕವನ್ನು ಕರಗಿಸಿದೆ. ನನ್ನ ಮುಖವು ಚಂದ್ರನ ಕಳಂಕವನ್ನು ತಿರಸ್ಕರಿಸುವಂತೆ ಮನೋಹರವಾದ ಕಸ್ತೂರಿ ತಿಲಕವನ್ನು ತಿದ್ದಿ ಅಲಂಕರಿಸು.

ಬಹು ಪ್ರೇಮದಿಂದ ಕಸ್ತೂರಿ ತಿಲದಿಂದ ರಾಧೆಯ ಮುಖವನ್ನು ಅಲಂಕರಿಸಿದ ಶ್ರೀಕೃಷ್ಣ. ಈಗ ರಾಧೆ ಮತ್ತಷ್ಟು ಸೌಂದರ್ಯದಿಂದ ಶೋಭಾಯಮಾನವಾಗಿ ಕಂಡಳು. ಆಕೆಯ ಸೌಂದರ್ಯದಿಂದ ಬೃಂದಾವನವೇ ಮತ್ತೊಮ್ಮೆ ಪುಳಕಗೊಂಡಿತು. ಪ್ರಕೃತಿ ಹೊಸ ಅಂದವನ್ನು ತಿದ್ದಿಕೊಂಡಿತು.

ಆಗ-





# ನೆಲಿ

**ಮಮ ರುಚಿರೇ ಚಿಕುರೇ ಕುರು ಮಾನದ ಮನಸಿಜ ಧ್ವಜ ಚಾಮರೇ।**
**ರತಿಗಲಿತೇ ಲಲಿತೇ ಕುಸುಮಾನಿ ಶಿಖಂಡಿ ಶಿಖಂಡಕಡಾಮರೇ॥**
**ನಿಜಗಾದ ಸಾ ಯದುನಂದನೇ।**
**ಕ್ರೀಡತಿ ಹೃದಯಾನಂದನೇ॥**

– ಗೀತಗೋವಿಂದ, ಅಷ್ಟಪದಿ ೨೪:೭

ಆ ರಾಧೆಯ ಹೃದಯಕ್ಕೆ ಆನಂದವನ್ನುಂಟು ಮಾಡುವ ಶ್ರೀಕೃಷ್ಣನೊಂದಿಗೆ ವಿಹರಿಸುತ್ತಾ ರಾಧಾರಾಣಿಯು ಹೀಗೆ ಹೇಳಿದಳು–

ಅಭಿಮಾನವತಿಯರ ಮಾನವನ್ನು ಕಳೆಯುವವನೇ (ಅಥವಾ ಪೂಜಿಸುವವನೇ)', ಅಂದವಾದದ್ದು, ಮನ್ಮಥನ ಧ್ವಜದಲ್ಲಿ ಚಾಮರದಂತೆ ಇರುವ, ಸುರತದಲ್ಲಿ ಸಿಲುಕಿ ಬಿಡಿಸಿಕೊಂಡು ಸುಕ್ಕಾಗಿರುವ, ಮನೋಹರ ವಾಗಿರುವ, ನವಿಲುಗರಿಗೆ ಭಯವನ್ನುಂಟು ಮಾಡುವಂತಹ ನನ್ನ ಜಡೆಯನ್ನು ಅಂದಗೊಳಿಸಿ ಹೂಗಳನ್ನು ಮುಡಿಸಿ ಅಲಂಕರಿಸು. ಈ ಬಯಕೆಯನ್ನು ಕೇಳಿ ಇದಕ್ಕಿಂತಲೂ ಮಹಾಭಾಗ್ಯ ಬೇರೆ ಉಂಟೇ ಎಂದು ಯದುನಂದನನು ಹೂಗಳನ್ನು ಮುಡಿಸಿದ. ಮತ್ತೊಮ್ಮೆ ವನವೆಲ್ಲಾ ಸುಗಂಧಪೂಸಿತಕೊಂಡಿತು. ಅತಿಲೋಕ ಸೌಂದರ್ಯವನ್ನು ತನ್ನೆದುರೇ ನೋಡಿದ ಶ್ರೀಕೃಷ್ಣನ ಹೃದಯವು ಝಲ್ ಎಂದಿತು.









# ಮಂಗಳಾಚರಣಂ



**ಶ್ರೀ ಜಯದೇವ ವಚಿಸಿ ರುಚಿರೇ ಹೃದಯಂ ಸದಯಂ ಕುರು ಮಂಡನೇ।**
**ಹರಿಚರಣ ಸ್ಮರಣಾಮೃತ ಕಲಿ ನಿರ್ಮಿತ ಕಲುಷ ಜ್ವರಖಂಡನೇ॥**

ಎಲೈ ಶ್ರೀಕೃಷ್ಣ ಮನೋಹರವಾದ ಈ ಗೀತೆಯು ಸರಸಜನ ಹೃದಯಕ್ಕೆ ಪನ್ನೀರಿನ ಸಿಂಚನದಂತಹುದು. ಅವರ ಹೃದಯಾಂತರಾಳವನ್ನು ಸೇರಿ ಹರಿಚರಣ ನಾಮಾಮೃತದಿಂದ ಈ ಕಲಿಯುಗದ ಕಲ್ಮಷಶಗಳನ್ನು ನಾಶಪಡಿಸುವ ಈ ಶ್ರೀಸೂಕ್ತಿಯನ್ನು ಸಹೃದಯಿಗಳು ಪಾರಾಯಣ ಮಾಡುತ್ತಾ ಆನಂದಿಸುತ್ತಾರೆ. ಸ್ತ್ರೀಯರ ಮನಸ್ಸುಗಳು ರಂಜಿತಗೊಳ್ಳುತ್ತವೆ.

**ಯದ್ಗಾಂಧರ್ವ ಕಲಾಸು ಕೌಶಲಮನುಧ್ಯಾನಂ ಚ ಯದ್ವೈಷ್ಣವಂ**
**ಯಚ್ಛೃಂಗಾರ ವಿವೇಕ ತತ್ತ್ವರಚನಾ ಕಾವ್ಯೇಷು ಲೀಲಾಯಿತಂ ।**
**ತತ್ಸರ್ವಂ ಜಯದೇವ ಪಂಡಿತ ಕವೇಃ ಕೃಷ್ಣೈಕತಾನಾತ್ಮನಃ**
**ಸಾನಂದಾಃ ಪರಿಶೋಧಯಂತು ಸುಧಿಯಃ ಶ್ರೀ ಗೀತಗೋವಿಂದತಃ ॥**

ಎಲೈ ಬುದ್ಧಿವಂತರೇ, ರಸಿಕಪ್ರಿಯರೇ, ಸೌಂದರ್ಯ ಪ್ರೇಮಿಗಳೇ ನೀವು ಈ ಕಾವ್ಯವನ್ನು ನಿತ್ಯಪಾರಾಯಣ ಮಾಡಿದರೆ ಗಂಧರ್ವಗಾನ ಸಿದ್ಧಿಸಿ, ಸಂಗೀತ ವಿದ್ವಾಂಸರಾಗುತ್ತೀರಿ. ಆ ಮಹಾವಿಷ್ಣುವಿನ ಬಗ್ಗೆ ಆಧ್ಯಾತ್ಮ ಚಿಂತಕರಾಗುತ್ತೀರಿ. ಸಂಭೋಗ ವಿಪ್ರಲಂಭ ಶೃಂಗಾರಗಳಲ್ಲಿ ಪ್ರವೀಣರಾಗುತ್ತೀರಿ. ಕವಿಗಳಾದವರು ಕಾವ್ಯವನ್ನು ರಚಿಸುವ ತಂತ್ರದಲ್ಲಿ ಸಿದ್ಧಿಯನ್ನು ಪಡೆದುಕೊಂಡು ಅಮರರಾಗುತ್ತಾರೆ. ಈ ಕಾವ್ಯವು ಶ್ರೀಕೃಷ್ಣನ ಲೀಲಾ ವಿಲಾಸದ ಆಡುಂಬೋಲ. ಸದಾ ಶ್ರೀಕೃಷ್ಣನಲ್ಲಿ ಏಕಾಗ್ರ ಭಕ್ತಿ ಶ್ರದ್ಧೆಗಳುಳ್ಳ ಶ್ರೀ ಜಯದೇವ ಪಂಡಿತ ಕವಿಯು ಗೋವಿಂದನ ಈ ಕಾವ್ಯವನ್ನು ಜಗತ್ತಿಗೆ ಅರ್ಪಿಸಿದ್ದಾನೆ. ಈ ಕಾವ್ಯವನ್ನು ನಿತ್ಯ ಪಾರಾಯಣ ಮಾಡುವವರು ಅತ್ಯಂತ ಆನಂದ ಭರಿತರಾಗಿ ರಸವೀಧಿಗಳಲ್ಲಿ ವಿಹರಿಸುತ್ತಾ ಶ್ರೀಕೃಷ್ಣನ ಹೃದಯ ಸಾಗರದಲ್ಲಿ ಬಿಂದುವು ಸಿಂಧುವನ್ನು ಸೇರಿದಂತೆ ಹಂಸಗಳಾಗಿ ವಿಲೀನಗೊಳ್ಳುತ್ತಾರೆ. ಸದಾ ಕೃಷ್ಣನನ್ನೇ ಸೇವಿಸುತ್ತಾ ಮುಕ್ತರಾಗಬಯಸುವ ಆರ್ಷ ಹೃದಯವನ್ನು ಪ್ರವೇಶಿಸಬೇಕೆಂಬ ಶಿಸ್ತೇ ಗೀತಗೋವಿಂದದ ಪಾರಾಯಣವನ್ನು ಪ್ರಾರಂಭಿಸುವ ಘಟ್ಟದ ಆನಂದದಲ್ಲೂ ಇರಬೇಕು.



**ಶ್ರೀ ಭೋಜದೇವ ಪ್ರಭವಸ್ಯ ರಾಮಾದೇವಿಸುತಸ್ಯ ಶ್ರೀಜಯದೇವಕಸ್ಯ ಪರಾಶರಾದಿ ಪ್ರಿಯವರ್ಗಕಂಠೇ ಶ್ರೀ ಗೀತಗೋವಿಂದ ಕವಿತ್ವಮಸ್ತು ॥**



ಶ್ರೀ ಭೋಜದೇವ ಮತ್ತು ರಮಾದೇವಿಯರ ಪುತ್ರನಾದ ಶ್ರೀ ಜಯದೇವನು ಈ ಗೀತಗೋವಿಂದ ಎಂಬ ಪ್ರಬಂಧಕಾವ್ಯವನ್ನು ರಚಿಸಿದ್ದಾನೆ. ಈ ಕಾವ್ಯವು ಪ್ರಿಯಪುತ್ರರು, ವಿದ್ವತ್ ಕವಿಗಳೂ ಆದ ಪರಾಶರ ಮುಂತಾದವರಿಂದ ನಿತ್ಯಗಾಯನ ಮಾಡಲ್ಪಟ್ಟು ಶಾಶ್ವತ ಸಿದ್ಧಿಯನ್ನು ಹೊಂದುವಂತಾಗಲಿ.



ಆ ದೇವದೇವನು 'ತಥಾಸ್ತು' ಎಂದಿರಬೇಕು. ಅದೇ ಆಗಿದೆ. ಶತಮಾನಗಳೇ ಕಳೆದಿದ್ದರೂ ಈ ಕಾವ್ಯದ ಔನ್ನತ್ಯ ಇನ್ನೂ ಏರುಮುಖವನ್ನೇ ಪಡೆದುಕೊಂಡಿದೆ. ಕವಿಗಳ, ಕಲಾವಿದರ ಹೃದಯಗಳಲ್ಲಿ ಈ ಕಾವ್ಯವು ಅಜರ-ಅಮರವಾಗಿ ಇಂದಿಗೂ ಬೆಳಗುತ್ತಲೇ ಇದೆ.

ಗೀತಗೋವಿಂದವು ಈಗ ಕೇವಲ ಸಾಹಿತ್ಯಕ ಕಾವ್ಯವಾಗಿ ಉಳಿದಿಲ್ಲ. ಕಲೆಯ ಎಲ್ಲಾ ಪ್ರಾಕಾರಗಳನ್ನೂ ವ್ಯಾಪಿಸಿದೆ. ಶತಮಾನಗಳು ಕಳೆದರೂ ಲಲಿತಕಲೆಗಳ ಎಲ್ಲಾ ಪ್ರಾಕಾರಗಳಲ್ಲೂ (ಸಾಹಿತ್ಯ, ಅಲಂಕಾರ, ಸಂಗೀತ, ನೃತ್ಯ, ಅಭಿನಯ, ಚಿತ್ರ, ಶಿಲ್ಪ) ಜನಪ್ರಿಯವಾಗಿ ಯಶೋವರ್ಧನಗೊಂಡಿರುವ ಅಮೃತ ಕಲಾಖಂಡ ಗೀತೋವಿಂದ. ಈ ಕಾವ್ಯವು - ಕಾಲದೊಂದಿಗೆ ತನ್ನ ಜನಪ್ರಿಯತೆಯನ್ನು ಹಿಗ್ಗಿಸಿಕೊಳ್ಳುತ್ತಾ ವರ್ಧಿಸುತ್ತಿದೆ. ಶಿಲ್ಪಗಳ ಮಾಧ್ಯಮದಲ್ಲಿ ಅದರ ಕಿರುದರ್ಶನವೇ ನಮ್ಮ ಈ ಪ್ರಯತ್ನ.

**॥ ವಂದೇ ಶ್ರೀಕೃಷ್ಣಂ ಜಗದ್ಗುರುಂ ॥**





## ಇವರಿಗೆ ವಂದನೆ

ಶಿಲ್ಪ ಗುರುಗಳು



**ಶಿಲ್ಪಿ ಎಂ. ರಾಮಮೂರ್ತಿ**

ನಂ. 2 ನರಸಗೌಡರ ಕಟ್ಟಡದ ಹತ್ತಿರ
ನಾಗದೇವನಹಳ್ಳಿ, ವಿನಾಯಕ ಲೇಔಟ್
ಜ್ಞಾನಭಾರತಿ ಅಂಚೆ, ಬೆಂಗಳೂರು-56
ಮೊ.:9845058344

ಶ್ರೀ ಎಂ. ರಾಮಮೂರ್ತಿ ಅವರು ಪಾರಂಪರಿಕ ಶಿಲ್ಪಿಗಳ ಕುಟುಂಬದಲ್ಲಿ ಜುಲೈ ೩, 1960ರಲ್ಲಿ ಬೆಂಗಳೂರಿನಲ್ಲಿ ಜನ್ಮಿಸಿದರು. ತಂದೆ ಶಿಲ್ಪಿ ಶ್ರೀ ವಿ. ಮಾಧವಾಚಾರ್ಯರು ಕಾಷ್ಠ ಶಿಲ್ಪಿಗಳು. ತಮ್ಮ ಕಾಲದಲ್ಲಿ ಪ್ರಖ್ಯಾತ ಶಿಲ್ಪಿಗಳಾಗಿದ್ದದ್ದು ಮಾತ್ರವೇ ಅಲ್ಲ ರಾಜ್ಯಪ್ರಶಸ್ತಿಯಿಂದ ಗೌರವಿಸಲ್ಪಟ್ಟಿದ್ದರು. ಸಾಂಪ್ರದಾಯಿಕ ಶಾಸ್ತ್ರೀಯ ಶಿಲ್ಪವು ಅವರಿಗೇ ಪೈತೃಕವಾಗಿ ಬಂದಿತ್ತು. ಆದ್ದರಿಂದ ಶ್ರೀ ರಾಮಮೂರ್ತಿ ಅವರೂ ಬಾಲ್ಯದಲ್ಲಿಯೇ ಶಿಲ್ಪವನ್ನು ಶಾಸ್ತ್ರೀಯ ಮಾರ್ಗದಲ್ಲಿ ತಮ್ಮ ತೀರ್ಥರೂಪರ ಪದತಲದಲ್ಲಿಯೇ ಕಲಿತರು.

ಮೊದಲಿಗೆ ಇವರ ಶಿಲ್ಪದ ಮಾಧ್ಯಮವು ಮರಮಾತ್ರವೇ ಆಗಿದ್ದರೂ ಬಾಲ್ಯದಲ್ಲಿಯೇ ಶಿಲೆ, ಮೃತಿಕೆ ಮತ್ತು ಗಾರೆಯ ಮಾಧ್ಯಮಗಳನ್ನು ತಮ್ಮ ಶಿಲ್ಪಕ್ಕೆ ಅಳವಡಿಸಿಕೊಂಡರು.

ಬೆಂಗಳೂರಿನ ರೀಜನಲ್ ಡಿಸೈನ್ ಅಂಡ್ ಟೆಕ್ನಿಕಲ್ ಡವೆಲೆಪ್‌ಮೆಂಟ್ ಸೆಂಟರ್‌ನಲ್ಲಿ ಶಿಲ್ಪಿಯಾಗಿ ಕೆಲವು ಕಾಲ ಸೇವೆಸಲ್ಲಿಸಿದ್ದಾರೆ. ಸಾಂಪ್ರದಾಯಿಕ ಶಿಲ್ಪಗಳನ್ನು, ವಿನ್ಯಾಸಗಳನ್ನು ಆಧುನಿಕರ ಬಳಕೆಗೆ ಸೂಕ್ತವಾಗುವಂತೆ ಬದಲಿಸಿ ಅನೇಕ ವಸ್ತುಗಳ ವಿನ್ಯಾಸವನ್ನು ಮಾಡಿಕೊಟ್ಟಿದ್ದಾರೆ. ಶಿಲ್ಪವನ್ನೇ ವೃತ್ತಿಯನ್ನಾಗಿಸಿಕೊಂಡು ಕಳೆದ ಮುವ್ವತ್ಮೂರು ವರ್ಷಗಳಿಂದ ಸೇವೆಸಲ್ಲಿಸುತ್ತಿದ್ದಾರೆ.

ಸೌತ್ ಝೋನ್ ಕಲ್ಚರಲ್ ಸೆಂಟರ್, ಕರ್ನಾಟಕ ಕ್ರಾಫ್ಟ್ ಕೌನ್ಸಿಲ್, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಕರ್ನಾಟಕ ಲಲಿತಕಲಾ ಆಕಾಡೆಮಿ ಮುಂತಾದವರು ಏರ್ಪಡಿಸಿರುವ ಶಿಬಿರಗಳಲ್ಲಿ, ಕಾರ್ಯಾಗಾರಗಳಲ್ಲಿ ಭಾಗವಹಿಸಿದ್ದಾರೆ.

ಶಿಲ್ಪಿ ಎಂ. ರಾಮ ಮೂರ್ತಿ ಅವರ ಕಲಾಕೃತಿಗಳು ಈ ಸ್ಥಳಗಳಲ್ಲಿವೆ-

ಮರದಲ್ಲಿ ತಯಾರಿಸಿರುವ ಮಹಾಭಾರತದ ಭಿತ್ತಿಚಿತ್ರ ಹೈದರಾಬಾದಿನ ಈನಾಡು ಕಚೇರಿಯಲ್ಲಿದೆ ಕುಶಾಲನಗರದ ಟಿಬೆಟಿಯನ್ನರ ಕೇಂದ್ರದಲ್ಲಿ ೩೦X೩೦ ಅಡಿ ವಿಸ್ತೀರ್ಣದ ತೋರಣವನ್ನು 'ಬುದ್ಧ ಆರ್ಚ್' ನಿರ್ಮಿಸಿದ್ದಾರೆ.

ಹೈದರಾಬಾದಿನ ರಾಮೋಜಿ ಫಿಲಿಂಸಿಟಿಯಲ್ಲಿ ರಾಮಾಯಣ ಮತ್ತು ಮಹಾಭಾರತಕ್ಕೆ ಸಂಬಂಧಿಸಿರುವಂತೆ ಮರದಲ್ಲಿ 20 ಕುಡ್ಯ ಚಿತ್ರಗಳನ್ನು (೬'x೪ ½' ಅಡಿ ಆಕಾರ) ಮಾಡಿದ್ದಾರೆ.

ಅಮೆರಿಕಾ ಮತ್ತು ಕೆನಡಾಗಳಲ್ಲಿ ಮಹಾತ್ಮಾಗಾಂಧಿ ಶಿಲ್ಪಗಳನ್ನು ಶಿಲೆಯಲ್ಲಿ ಮಾಡಿಕೊಟ್ಟಿದ್ದಾರೆ. ಕೀನ್ಯಾದ ನೈರೋಬಿಯಲ್ಲಿ ನಿರ್ಮಿತವಾಗಿರುವ ಶಿವಾಲಯದ ಮುಖ್ಯದ್ವಾರವನ್ನು ವಿನ್ಯಾಸ ಮಾಡಿ ನಿರ್ಮಿಸಿದ್ದಾರೆ. ನ್ಯೂಯಾರ್ಕ್‌ನ ಫಲ್ಲಾಸ್ ಖರ್ಗ್‌ನಲ್ಲಿ ಹಲವು ಮರದ ಕೆತ್ತನೆಗಳನ್ನು ಮಾಡಿದ್ದಾರೆ. ತಮ್ಮ ಕೃತಿಗಳನ್ನು ಆ ದೇಶಗಳಲ್ಲೂ ಸ್ಥಾಪಿಸಿದ್ದಾರೆ.

ಇವರು ವಿನ್ಯಾಸ ಮಾಡಿ ನಿರ್ಮಿಸಿರುವ ಮರ, ಶಿಲೆ ಮತ್ತು ಮೃತಿಕೆಯಲ್ಲಿ ಭಿತ್ತಿ ಚಿತ್ರಗಳು ಕೆಲವು ಸರ್ಕಾರಿ ಕಛೇರಿಗಳು, ಕಾರ್ಪೋರೇಟ್ ಕಛೇರಿಗಳಲ್ಲಿವೆ. ಇಂಡೋನೇಷಿಯಾ, ಮಲೇಷಿಯಾ, ಸಿಂಗಪುರಗಳಿಗೆ ಶಿಲ್ಪಸಂಬಂಧವಾಗಿ ಪ್ರವಾಸ ಮಾಡಿದ್ದಾರೆ.

ಇದುವರೆವಿಗೂ ಸಾಂಪ್ರದಾಯಿಕ ಶಿಲ್ಪದ ಸುಮಾರು ಐವತ್ತು ಮಂದಿ ಶಿಷ್ಯರಿಗೆ ಶಾಸ್ತ್ರ ಮತ್ತು ಶಿಲ್ಪದ ಪಾಠವನ್ನು ಮಾಡಿ ಶಿಲ್ಪಿಗಳನ್ನಾಗಿ ತಯಾರಿಸಿದ್ದಾರೆ. ಅವರಲ್ಲಿ ಹಲವರು ಸ್ವತಂತ್ರ ಶಿಲ್ಪಿಗಳಾಗಿ ವೃತ್ತಿ ಮಾಡುತ್ತಿದ್ದಾರೆ. ಶ್ರೀ ರಾಮಮೂರ್ತಿಯವರು ಸಾಂಪ್ರದಾಯಿಕ ಶಿಲ್ಪಕ್ಷೇತ್ರದಲ್ಲಿ ಹೆಸರು ಮಾಡಿರುವಂತೆಯೇ ಸಮಕಾಲೀನ ಶಿಲ್ಪದಲ್ಲೂ ಖ್ಯಾತ ನಾಮರೂ ಜನಪ್ರಿಯರಾಗಿದ್ದಾರೆ.



**ಅಭಿನಯದ ನೆರವು**



**ಶ್ರೀಮತಿ ಶ್ರೀರಂಜಿನಿ ಉಮೇಶ್**

(ನೃತ್ಯ ಕಲಾವಿದರು)
ನಂ. 31, ಅನ್ನಪೂರ್ಣ, 13ನೇ ಮೇನ್
ವಿಜಯನಗರ, ಬೆಂಗಳೂರು – 560 040
ಮೊ. : 9886980004

**ರೇಖಾಚಿತ್ರದ ನೆರವು**



**ಶ್ರೀ ರಾ.ಸೂರಿ (ಚಿತ್ರ ಕಲಾವಿದರು)**

ಎಂ.ಎಫ್.ಸಿ/12, ನಂದಿನಿ ಲೇಔಟ್
ಬೆಂಗಳೂರು – 560 096



ಗೀತ ಗೋವಿಂದ
(೧೨ ಉಬ್ಬು ಶಿಲ್ಪಗಳು)

## ಶಿಲ್ಪಿಗಳು



**ಶ್ರೀ ಸಿ. ಮಂಜುನಾಥ ಆಚಾರ್ಯ**
ಬಿನ್ ಶ್ರೀ ಪಿ. ಚಕ್ಕಣ್ಣಾಚಾರ್ಯ
ಬಾಗೇನಾಳು, ಹುಣಸೇಕಟ್ಟೆ ಅಂಚೆ,
ಚಿತ್ರದುರ್ಗ ತಾ॥ ಜಿಲ್ಲೆ.
ಮೊ. : 9480065804



**ಶ್ರೀ ಎನ್. ಮನ್ಮಥ ಆಚಾರ್ಯ**
ಬಿನ್ ನ್ಯಾನಚಾರ್ಯ
ಮುಗಬಾಳ, ಹೊಸಕೋಟೆ ತಾ॥
ಬೆಂಗಳೂರು ಗ್ರಾಮಾಂತರ ಜಿಲ್ಲೆ
ಮೊ : 9538539375



**ಶ್ರೀ ಉದಯ ಆಚಾರ್ಯ**
ಸೌರಭ ಆರ್ಟ್ಸ್,
ಎಸ್.ಬಿ.ಐ. ಬ್ಯಾಂಕ್ ಹಿಂಭಾಗ,
ಬಿಡದಿ, ರಾಮನಗರ
ಮೊ. : 9945751079



**ಶ್ರೀ ಜಿ.ವಿ. ಶಿವಕುಮಾರ್**
ನಂ. 369, 3ನೇ ಇ ಮುಖ್ಯರಸ್ತೆ,
5ನೇ ಅಡ್ಡರಸ್ತೆ, ರಾಜರಾಜೇಶ್ವರಿ ಬಡಾವಣೆ
ನಾಗದೇವನಹಳ್ಳಿ, ಬೆಂಗಳೂರು – 056
ಮೊ. : 9845295766



**ಶ್ರೀ ಕೆ. ರಮೇಶ ಆಚಾರ್ಯ**
ನಂ. 8, 3ನೇ ಕ್ರಾಸ್,
ಅನುಭವನಗರ
ನಾಗರಭಾವಿ ಮುಖ್ಯರಸ್ತೆ,
ಬೆಂಗಳೂರು – 072



**ಶ್ರೀ ವಸಂತ**
ಕೆಳದಿಪುರ,
ಬೇಲೂರು ಅಂಚೆ,
ಸಾಗರ ತಾ॥ ಶಿವಮೊಗ್ಗ ಜಿಲ್ಲೆ
ಮೊ. : 9686439783



**ಶ್ರೀ ಅರುಣ್‌ಕುಮಾರ್ ಆಚಾರ್ಯ ಕೆ.**
ನಂ. 43, 1ನೇ ಬಿ ಮುಖ್ಯರಸ್ತೆ
1ನೇ ಬ್ಲಾಕ್, ಜಕ್ಕಸಂದ್ರ ಬಡಾವಣೆ,
ಕೋರಮಂಗಲ, ಬೆಂಗಳೂರು – 034
ಮೊ. : 9731567044



**ಶ್ರೀ ಅರುಣ್**
ಗೊಲ್ಲರಹಟ್ಟಿ,
ಸಾಯಿಗಾರ್ ಮೋಟರ್ಸ್ ಹತ್ತಿರ
ಬೆಂಗಳೂರು,
ಮೊ. : 9611599390

## ಛಾಯಾಗ್ರಾಹಕರು



**ಸಿ.ಆರ್. ವೆಂಕಟೇಶ್**
ನಂ. 28, 5ನೇ ಕ್ರಾಸು, 3ನೇ ಮೇನ್
ಹನುಮಂತನಗರ, ಬೆಂಗಳೂರು
ಮೊ. 94489 35553

